# ನಿವೇದನೆ

ಲಲಿತ ಸಾಹಿತ್ಯಮಾಲೆಯ ಹನ್ನೊಂದನೆಯ ವರುಷದ ಎರಡನೆಯ ಕುಡಿ—ಈ 'ಚೈತ್ರಪಲ್ಲವ'. ಮೊದಲನೆಯ ಕುಡಿ 'ಸಂಪಿಗೆಯ ಹೂ' ಕೂಡ ಇದರ ಜತೆಯಲ್ಲಿಯೇ ಚಂದಾದಾರರ ಕೈ ಸೇರುತ್ತದೆ.

ಈ ಕೃತಿಕಾರರಾದ ಶ್ರೀ ರಾಮಚಂದ್ರ ಕೊಟ್ಟಲಗಿಯವರು ಮಾಲೆಯ ವಾಚಕರಿಗೆ ಹೊಸಬರಲ್ಲ. ಅವರ 'ದೀಪನಿರ್ವಾಣ'ವೆಂಬ ಕಾದಂಬರಿಯೊಂದಲ್ಲದೆ ಅವರ ಪ್ರಥಮ ಕಥಾಸಂಗ್ರಹ 'ಗೀಚುಗೆರೆ'ಯೂ ಮಾಲೆಯ ಕುಡಿಯಾಗಿಯೇ ಪ್ರಕಟವಾಗಿತ್ತು. ಶ್ರೀಯುತರು ಪ್ರಾದೇಶಿಕ ಕೆಚ್ಚಿನ ಜವದದಿಂದ ಶೈಲಿಗೆ ಸಹಜತೆಯನ್ನು ತಂದುಕೊಂಡವರು. ಈ ವೈಶಿಷ್ಟ್ಯದಿಂದ ಇವರ ಕೃತಿಗಳು ಜನಪ್ರಿಯವಾಗಿವೆ,—ಮಾತ್ರವಲ್ಲ; ಇವರ 'ಗೀಚುಗೆರೆ'ಯ ಕತೆಗಳಿಗೆ ರಾಜ್ಯ ಸರಕಾರದ ಸಾಹಿತ್ಯ ಪಾರಿತೋಷಕವೂ ದೊರೆತಿದೆ. ಮಾಲೆಯ ಲೇಖಕಸಂಪುಟದ ಮೂವರು ಇಂಥ ಶ್ರೇಯೋಭಾಗಿಗಳು—ಎಂಬುದು ಮಾಲೆಗೆ ತುಂಬ ಹೆಮ್ಮೆಯ ಮಾತು. ಅಂಥ ಇಬ್ಬರ ಕೃತಿಗಳನ್ನು ಈಗ ಜೊತೆ-ಜೊತೆಯಾಗಿಯೇ ಪ್ರಕಟಿಸುವ ಅವಕಾಶವೊದಗಿದ್ದು ನಮಗೆ ತುಂಬ ಸಂತಸದ ಸಂಗತಿ.

ತಮ್ಮ ಹೊಚ್ಚಹೊಸ ಕತೆಗಳ ಈ ಗೊಂಚಲನ್ನು ಪ್ರಕಟಿಸಲು ಎಡೆ ಮಾಡಿಕೊಟ್ಟ ಲೇಖಕರಿಗೂ ಎರಡು ಪುಸ್ತಕಗಳನ್ನು ಒಮ್ಮೆಲೆ ಪ್ರಕಟಿಸಲು ನೆರವಾದ ಲಲಿತ ಮುದ್ರಣಾಲಯದ ಶ್ರೀ. ಬಸವರಾಜ ಹೊರಡಿಯವರಿಗೂ ನಾವು ತುಂಬ ಋಣಿಯಾಗಿದ್ದೇವೆ.

ಲಲಿತ ಸಾಹಿತ್ಯಮಾಲೆ, ಧಾರವಾಡ
೮—೫—೧೯೫೮

-ಸಂಪಾದಕ

# ಪರಿವಿಡಿ


| | | ಪುಟ |
|---|---|---|
| ೧. | ಮುತ್ತೈದೆಯ ಮಾನಸ | ೧–೨೮ |
| ೨. | ನಾನು–ಅವಳು | ೨೯–೪೦ |
| ೩. | ನೆನಪಿನ ಗೋರಿ | ೪೧–೫೩ |
| ೪. | ಪಂತಮಾಸ್ತರ ಮುಂಬೈಗೆ ಹೋಗುತ್ತಾರೆ | ೫೪–೬೫ |
| ೫. | ಗೋಗ್ರಹಣ | ೬೬–೮೭ |
| ೬. | ಚೈತ್ರಪಲ್ಲವ | ೮೮–೯೯ |

# ಮುತ್ತೈದೆಯ ಮಾನಸ

ಅಂದು ಒಂದನೇ ತಾರೀಖು. ಸಂಬಳ ಬಂದಿತ್ತು. ಅಲ್ಲದೆ ಶನಿವಾರ ವಾದ ಕಾರಣ, ಕಚೇರಿಗೆ ಬೇಗ ಬಿಡುವೂ ಆಗಿತ್ತು. ನಾನು ಮನೆಗೆ ಬಂದಾಗ ಸಂಜೆಯ ೪-೪½ ಗಂಟೆಯಾಗಿರಬೇಕು. ಕೈ-ಕಾಲು, ಮುಖ ತೊಳೆದುಕೊಂಡು ಬರುವಷ್ಟರಲ್ಲಿ, ಸುಧಾ ಅಡುಗೆಯ ಮನೆಯಲ್ಲಿಯೇ ಮಣೆ ಹಾಕಿ, ತಿನಿಸು, ಚಹದ ತಟ್ಟೆ ತಂದಿರಿಸಿದಳು. ಇಬ್ಬರೂ ಚಹ ತೆಗೆದು ಕೊಳ್ಳುತ್ತಿರುವಂತೆ ಸುಧಾ ಕೇಳಿದಳು. "ಇಂದ ರಾಕ್ಸಿಯೊಳಗ How Green is my Valley ಕಡೀ ದಿವಸ. ಮೊದಲಿನ ಶೋಕ್ಕ ಹೋಗಿ ಬರೋಣೇನು ?"

"ಚಹಾದ ಜೋಡಿ ಫರಾಳ ಬಂದಾಗಲೇ ಅನಿಸಿತು — ಇದು ಮಾತಿಗೆ ಪೀಠಿಕಾ ಆಗಿರಬೇಕು ಅಂತ. ಸಿನೇಮಾದ ಹುಚ್ಚಿಲ್ಲದವ ಬಗೀ ಹರಿದದ್ದ ನೋಡಿ ಆಶ್ಚರ್ಯವಾತು."

"ಯಾಕಂಗರೀ ಖರೇ ಅನಿಸೀತು. ರೆಪ್ಪಿನ್ಯಾ ಖಾತ್ರೀ ಮಂದಿ ನೀವು. ಕೈಯಾಗ ಹಿಡದಿಟ್ಟಿಲ್ಲಾ ಲಂಚಫಾಂಗಳ ಕಾಣಾಸ್ತದ ನಿಮಗ. ಸಿನೇಮಾಕ್ಕ ನಾ ಒಬ್ಬಾಕೀನಽ ಹೋಗತೀನಿ, ಅಂದಿದ್ರ ಆ ಮಾತ ಬ್ಯಾರೆ; ಹೋಗಿ ಬರೋಣೇನು ಅಂದೀನಿ, Plural Senseದಾಗ."

"ಅಲಬತ್ ಬರ್ತಿದ್ದೆ. ಆದರ, ಇಂದ, ನಾಳೆ ಜಾಗಾ ಹಿಡಿದ ಕೂತು ಕಾದಂಬರೀ ಮುಗಸಬೇಕಂತ ಘಟ್ಟಿ ಮಾಡಕೊಂಡೀನಿ. ಪ್ರಕಾಶಕರಿಂದ ಮತ್ತ ಕಾಗದ ಬಂದದ. ಅವರ್ನ್ನರೇ, ಪಾಪಾ, ಎಷ್ಟಂತ ನಿರಾಶಾ ಮಾಡೂದು. ಮುಂಗಡ ರೊಕ್ಕಾ ಕೊಟ್ಟು ಕೂತಾರ. ಈ ಸಾರೇ ನೀನಽ ಹೋಗಿ ಬಂದು ಬಿಡು. ಜೋಡಿಗೆ ಪೇಶಾರ್ರ ದಾಮೂನ್ನ ಕರಕೊಂಡು ಹೋಗು. ಈಗಽ ಹೇಳಿರತೀನಿ, ನಾಳಿನ ಬಾಬ್ತುಂದನೂ ನಿಂದಽ ಮಾತ್ರ."

"ಆತು ನಾ ಕೇಳಿದಾಗೊಮ್ಮೆ ಈ ಹಾಡ ಇದ್ದದ್ದಽ. ನಾಳಿನ ಪ್ಯಾಟೀ ಮಾಡೂದೇನು ನನಗ ಸೀಗದ ಮಾತಾ. ಉಪ್ಪುಗೂಡಿಸಿ ಒಂಭತ್ತ ಸಾಮಾನ

ತರಬೇಕು. ಚಹಾಪುಡಿಗಂತ ಕ್ಯಾಂಪಿಗೆ ಹೋಗಬೇಕು. ರವಿವಾರಪ್ಯಾಟ್ಯಾಗ ಮೆಣಸಿನಕಾಯ್ಗಿ ತಿರಗಬೇಕು. ಒಬ್ಬಾಕೀಗೆ ಏನ ಜವಾಸು ಕೆಲಸ ಅಲ್ಲಾ."

"ಅಲ್ಲಽ ಪುಡೀ ತಂದು ಇನ್ನೂ ಎಂಟಾ ದಿನಾ ಸುಟ್ಟೀ ಆಗಿಲ್ಲಾ. ಮತ್ತ್ಯಾಕ ತರೂದು."

"ನಾನಽ ಚಹಾ ಮಾಡಿ ಕುಡಿದೆನಲಾ. ಒಪ್ಪತ್ತಿಲ್ಲ ಒಪ್ಪತ್ತ ತಪ್ಪದಽ ಹರಕೀ ಹಾಕೂ ಗೆಳ್ಯಾರು, ಕಚೇರಿ ಮಂದಿ, ನನ್ನ ಕಡೆ ಬರತಾರೇನು? ಎಷ್ಟ ಈಡ ಮಾಡಿದ್ರೂ ಅಷ್ಟನಽ. ಮುಂಜಾನಿಂದ ಸಂಜೀತನಕಾ ಏನಿಲ್ಲಂದರೂ ೧೦-೧೫ ಕಪ್ಪ ಚಹಾ ಏನ ತಪ್ಪಿದ್ದಲ್ಲಾ."

"ನನ್ನ ಕಡೇ ಬರೂ ಗೆಳ್ಯಾರ ಹೆಸರಿನಿಂದಽ ಕಲ್ಲ ಒಡಿಯೂದು. ಅಷ್ಟರಾಗಽ ಸವರಿಸಿಕೊಂಡು ಹೋಗೂವ್ನ ಕಲ್ತೀ ಇಲ್ಲಾ. ಇನೂ ಎದರಾಗ ಏನಿಲ್ಲಾ; ನಾಳೆ ಮಕ್ಕಳ ಮರೀ ಆದ್ರ ಹ್ಯಾಂಗ ಮಾಡತ್ತ್ಯೋ ಏನೋ. ಯಾವಾಗ ಕೇಳಿದ್ರೂ ಇದಽ ಹಾಡಽ. ತಿಂಗಳ ಅಖೇರಕಂದರ ಮನೀ ರಾವು ರಕ್ಷ ಆಗಿರತದ."

"ತಿಂಗಳ ಖರ್ಚು, ಪೈ-ಪಾವ ಅಣೇ ಬರದ ಇಟ್ಟಿರತೀನಿ. ಬೇಕಾರ ತಪಾಸಮಾಡಿ ನೋಡ್ರಿ ಸುಮ್ನ ಸಂಶಯ ಬ್ಯಾಡಾ. ನಿಮಗ ಅನಸತಿರ ಬೇಕು, ನನ್ನ ಬಳಗಾ, ಹತ್ತಿ ಹೊಂದಿದವರು, ಬಂದು ತಿಂಪ ಹಾಳಮಾಡ ತಿರಬೇಕಂತ. ಬಾಜೂದ ಮನ್ಯಾಗಿದ್ರೂ ಒಂದಿನಾ ಕಡಾ ಅಂತ ಒಂದ ಚಿಮು ಟಿಗಿ ಸಾಮಾನ ಒಯ್ಯಾಂಗಿಲ್ಲಾ. ಏನ ಖರ್ಚು ಒಂದೇ ಅದ—ಅದು ನಿಮ್ಮದಽ. ಸಿಗರೇಟಿಗೆ ಹತ್ತಣೆ, ಚಹಾಕ್ಕ ಐದ ಆರ ಅಣೆ. ಇಲ್ಲೇ ದಿನಾ ಒಂದು ರೂಪಾಯಿ ಖೋತಾ. ಈ ಹೊರಗಿನ ಖರ್ಚು ಬಿಟ್ರೂ ಮನ್ಯಾಗಿನ ಅಂದಾದುಂದಿಗೆ ಏನ ಕಡಿಮಿಲ್ಲಾ; ನಾಳೆ ಸೂಟಿ, ಇಸ್ಪೇಟಿನ ಅಡ್ಡೀ ಬೀಳಲಿ, ಆಗ ಹೇಳತೀನಿ—ಎಷ್ಟು, ಏನು ಖರ್ಚ ಆತಂತ. ಈಗ್ಯಾಕ ಆ ಮಾತಽ."

"ಹಾಳಭಾಂವೀ ಬೀಳಕೋ. ಸುಮ್ನಽ ತಲೀ ಕೆಡಸಬ್ಯಾಡಾ. ದುಡದ ತಂದು ಹಾಕೂದ್ನಷ್ಟ ಮಾಡತೀನಿ. ತಿರಗೀ ಮುರಗೀ ಕೇಳಿದರ, ಅಷ್ಟ, ಸಿಗ ರೇಟ ಸೇದೂದನ್ನ ಹಂಗಿಸಿ ಚುಚ್ಚತೀದಿ. ನಿನ್ನ ಪಾವಡರಾ, ಸ್ನೋ, ಪಾಂಚ ವಾರೀ ಲೆಕ್ಕಾ ಮಾತ್ರ ಯಾತರಾಗೂ ಹಿಡೀಬ್ಯಾಡಾ."

ಚಹ ಆಗಲೇ ಮುಗಿದಿತ್ತು. ಹೊರಗೆದ್ದು ಬಂದು, ಇನ್ನೂ ಕೋಟಿನ ಕಿಸೆಯಲ್ಲಿಯೇ ಇದ್ದ ಹತ್ತು-ಹತ್ತು ರೂಪಾಯಿಯ ಹದಿನೈದು ನೋಟುಗಳನ್ನು ತಂದು, ಯಥಾ ಪ್ರಕಾರ ಸುಧಾನ ಮುಂದೆ ಒಗೆದು, ಪಡಸಾಲೆಯಲ್ಲಿಯ ನನ್ನ ಕೋಣೆಗೆ ಬಂದು ಕುಳಿತೆ. ಸುಧಾ, ಸಂಣ ಮುಖಮಾಡಿಕೊಂಡು, ಇನ್ನೂ ಅಡುಗೆಯ ಮನೆಯಲ್ಲಿಯೇ ಕುಳಿತಿದ್ದಳು.

ಅವಳು ನನ್ನ ಬಗ್ಗೆ-ನನ್ನ ವೆಚ್ಚದ ಬಗ್ಗೆ ಆಡಿದ ಮಾತು ಶಬ್ದಶಃ ಸತ್ಯವಾಗಿದ್ದವು. ಆದರೆ ಅವನ್ನು ಒಪ್ಪಿಕೊಂಡು ರಾಜಿಯಾಗಲು ಮನಸ್ಸು ಒಡಂಬಡಲಿಲ್ಲ. ಸಾಧಾರಣವಾಗಿ, ಆಗೀಗ ಮನೆಯ ವೆಚ್ಚದ ಬಗ್ಗೆ, ಅದೂ ಒಂದನೇ ತಾರೀಖು ಒಂದೇ ದಿನ ಅಷ್ಟಿಷ್ಟು ಮಾತಾದರೂ ಅದರ ಕಾವು ತೀರ ಬೇಗ ಇಳಿದು, ಎಲ್ಲ ನಗೆಯ ಮೇಲೆ ಹೋಗಿಬಿಡುತ್ತಿತ್ತು. ಆದರೆ ಇಂದು ಮಾತ್ರ ಅದು ಒಂದಿಷ್ಟು ಬಿರುಸಾಗಿಯೇ ಆಯಿತೆಂದು ನನಗೆನಿಸಿತು. ನಾನು ದುಡುಕಿ ಅವಳ ಮನಸ್ಸನ್ನು ಇಷ್ಟು ನೋಯಿಸಬಾರದಾಗಿತ್ತು. ನಿಜವಾಗಿ ನೋಡಿದರೆ ಅವಳ ಖರ್ಚೇ ಇರಲಿಲ್ಲ. ಪಾವಡದ-ನೆಷ್ಟೇ ಇಬ್ಬರಿಗೂ ಬೇಕಾಗುತ್ತಿತ್ತು. ಒಂದು ದಿನ ಕೂಡ, ಆಕೆ, ಕಾಡಿಬೇಡಿ ಅರಿವೆ ಅಂಚಡಿಗೆ, ವಸ್ತ್ರ-ಒಡವೆಗೆ, ಸ್ನೋ, ಪಾವಡರಿಗೆ ಕೂಡ ಹಣ ಬೇಡಿರಲಿಲ್ಲ. ನನ್ನ ಸಂಬಳ ಆಕೆಯ ಕಡೆಗೇ ಇದ್ದರೂ ತಪ್ಪಿ, ಖರ್ಚು ಮಾಡುತ್ತಿರಲಿಲ್ಲ. ಖರ್ಚಿನ ಬಾಬಿನಲ್ಲಿ ಅವಳದೆನ್ನುವದು ಏನೂ ಇರುತ್ತಿರಲಿಲ್ಲ. ಮಗ್ಗಲು ಮನೆಯಲ್ಲಿಯೇ ಇದ್ದ ತಂದೆ-ನಮ್ಮ ಮಾವನವರು, ಅವಳಿಗೆ ಯಾವುದಕ್ಕೂ ಕಡಿಮೆ ಮಾಡುತ್ತಿರಲಿಲ್ಲ. ಅವಳು ಅಪೇಕ್ಷಿಸದಿದ್ದರೂ, ಅವರು ಆಕೆಯ ಆಶೆ ಆಕಾಂಕ್ಷೆಗಳನ್ನು ತಾವಾಗಿ ಪೂರೈಸುತ್ತಿದ್ದರು. ನಮ್ಮ ಮದುವೆಯಾಗಿ ೩-೪ ವರುಷವಾದವು. ಈ ಅವಧಿಯಲ್ಲಿ ಅವಳಿಗೆಂದು, ನಾನು ಕೊಂಡ ವಾಯಿಲಿನ ಸೀರೆ ೩-೪ ಅಷ್ಟೇ. ಅವೂ ಅವಳಿಗೆ ಅರಿಯದೇ ಅವಳಿಗೆ ಒಪ್ಪುತ್ತಿದೆಯೆಂದು, ಆ ಬಂಣ ಆ ರೂಪಿಗೆ ಅನುರೂಪವಾಗುತ್ತಿದೆಯೆಂದು ಅನ್ನಿಸಿದಾಗ ನಾನೇ ಕೊಂಡು ತಂದದ್ದು. ಅವಳ ತಂದೆ, ಅಂಣ ಕೊಟ್ಟ ಬ್ಲಾವುಜ ಪೀಸ, ಪ್ರಿಂಟೆಡ ಸೀರೆ, ಜರದ ಪತ್ತಲು ಎರಡು ಪೆಟ್ಟಿಗೆ ತುಂಬಿವೆ. ಆದರೆ ನಾನು ತಂದದ್ದನ್ನೇ, ನನ್ನ ಮನಸ್ಸಿಗೆ ಒಪ್ಪಿಗೆಯಾಗುತ್ತಿದೆ ಎಂದದ್ದನ್ನೇ ಮಾತ್ರ ಅವಳಿನ್ನೂ ಉಡುತ್ತಿದ್ದಾಳೆ.

ಹೀಗಿದ್ದೂ ನಾನು ಪಾಚವಾರಿಯ ವಿಷಯ ಎತ್ತಿ ಅವಳನ್ನು ನೋಯಿಸಿದ್ದು ಅಕ್ಷಮ್ಯವಾಗಿತ್ತು.

ಸಂಣ ಮುಖಮಾಡಿಕೊಂಡು, ಕುಳಿತ ಜಾಗ ಬಿಟ್ಟು ಅಲ್ಲಾಪಪ ಕುಳಿತುಕೊಂಡಿರುವಾಗಲಾದರೂ ನಾನು ಹೋಗಿ ಅವಳನ್ನು ಎಬ್ಬಿಸಿ, ರಮಿಸಬೇಕಾಗಿತ್ತು. ಅದನ್ನೂ ಮಾಡಲಿಲ್ಲ. ಅದು ನನ್ನ ತಪ್ಪು. ತಪ್ಪು ಒಪ್ಪಿಕೊಂಡರೆ ಗಂಡಸರ ಜಾತಿಗೇ ಹೊರತಾದೇನಲ್ಲ!

ಅರ್ಧ ಬರೆದ ಕಾದಂಬರಿಯನ್ನು ತೆರೆದೆ. ಸಿಗರೇಟು ಹೊತ್ತಿಸಿ ಬರೆಯುವ ಸನ್ನಾಹ ಮಾಡುತ್ತಿದ್ದೆ. ಇದೀಗ ನಡೆದ ಮಾತು-ಕತೆಯ ಕಾವು ಇನ್ನೂ ಬಿಸಿಯಾಗಿತ್ತು. ಮನಸ್ಸು ವ್ಯಗ್ರವಾಗಿ ಪ್ರಸನ್ನತೆ ಅಳಿದಿತ್ತು. ಬರವಣಿಗೆಯನ್ನು ಹೇಗೆ ಮೊದಲು ಮಾಡುವದು ಎನ್ನುವ ವಿಚಾರವೇ ಮುಸಕಾಗಿತ್ತು. ಹೊತ್ತಿಸಿದ ಸಿಗರೇಟು ಮುಗಿವದ್ದರ ಅರಿವು, ಅದರ ಆನೆಯ ಬಾಲದ ವರೆಗೂ ಝುಳ—ಬೆಂಕಿ ಬಂದಾಗ, ಅಕ್ಷರ ಮೂಡುವ ಒಲವು ತೋರಲಿಲ್ಲ; ತೊರೆ ಬಿಡುವ ಲಕ್ಷಣ ಕಾಣಲಿಲ್ಲ.

ಅಷ್ಟರಲ್ಲಿ ಹೇಳಿಕಳಿಸಿದಂತೆ, ಕೋಣೆಯ ಬಾಗಿಲನ್ನು ನೂಕಿ, ಗಣಪತಿ, ಶಿವರಾಮ ಧುತ್ತೆಂದು ಬಂದು ನಿಂತರು. ಇವರಿಗೇನು ಪ್ರವೇಶ ಸಮ್ಮತಿಯ ಪೂರ್ವಸೂಚನೆಯ ಅಗತ್ಯವಿದೆಯೆ? ಅವರು ಯಾವಾಗಲೂ ಕಂಟಕಪ್ರಾಯರು. ಆದರೂ ಗಳಸ್ಯ ಕಂಠಸ್ಯ ಗೆಳೆಯರು.

ನಾವು ಮೂವರೂ ಒಂದೆಡೆ ಕೂಡಿ, ಆಡಿ, ಕಲಿತು ಒಂದೇ ಖಾತೆಯಲ್ಲಿ ನವಕರಿಗೆ ಸೇರಿದವರು. ನವಕರಿಗೆ ಸೇರಿ ಒಂದು ವರುಷವಾಗಿರಬೇಕು,—ನನಗೆ ಕಮೀಷನರ್ ಕಚೇರಿಗೆ ವರ್ಗವಾಯಿತು. ಅಂದಿನಿಂದಲೂ ನಾನು ಇಲ್ಲಿಯೇ ಉಳಿದಿದ್ದೇನೆ. ಅವರು ೨-೩ ವರುಷ ಮಾಮಲೇದಾರ-ಕಲೆಕ್ಟರ, ಕಚೇರಿ ಅಲೆದಾಡಿ ಮೊನ್ನೆ ಮೊನ್ನೆ ಕಮೀಷನರ ಕಚೇರಿಗೆ ಬದಲಿಯಾಗಿ ಬಂದಿದ್ದರು. ಮತ್ತೆ ನಮ್ಮ ಅಡ್ಡೇ ಜಮಾಯಿಸಿತ್ತು.

"ಇಲ್ಲೀ ತನಕಾ ಅಂತೂ ದೇವರೂ ಹಿಂಗ ನಡಿಸಿಕೊಂಡ ಬಂದಾ. ಇಲ್ಲೀ ಪುಣ್ಯಾ ಮುಗದ ಮ್ಯಾಲ, ಸ್ವರ್ಗ-ನರಕ ಎಲ್ಲೀ ಆಗಲಿ, ಮೂರ ಸೀಟ ನಮಗ Reserve ಮಾಡಲಿಕ್ಕ ಮರೀದಿರಲಿ ಅಂದರ ಆತು." ಎಂದು ಶಿವರಾಮ ಹಾಡುತ್ತಿದ್ದ. ಅಷ್ಟು ಅನ್ಯೋನ್ಯರಾಗಿದ್ದೆವು.

ಹಾಗೆ ನೋಡಿದರೆ, ಮೂವರಲ್ಲಿ ನಾನೇ ಒಂದಿಷ್ಟು ಗುಮ್ಮನಗುಸುಕ. ಒಡೆದು ಯಾವ ಮಾತನ್ನೂ ಆಡುತ್ತಿರಲಿಲ್ಲ. ನನ್ನ ದುಃಖ, ನೋವು, ನರಳಾಟ, ಯಾವುದನ್ನೂ ಬಿಚ್ಚಿ ಆಡಿತೋರಿಸುತ್ತಿರಲಿಲ್ಲ. ನನ್ನ ಮದುವೆಯ ವಾರ್ತೆ ಕೂಡ ಅವರಿಗೆ ತಿಳಿದದ್ದು, ಲಗ್ನ ಪೂರ್ವದಲ್ಲಿ ಕೇವಲ ಎರಡೇ ಎರಡು ದಿನ ಮುಂಚಿತವಾಗಿ. ಹಾಗೆ ನೋಡಿದರೆ ಅವರಿಂದ ಯಾವುದನ್ನೂ ಬಚ್ಚಿಡುವದರಲ್ಲಿ ನನಗೆ ಅಸ್ಟು ಉದ್ದೇಶವಿರಲಿಲ್ಲ. ನನ್ನ ಸ್ವಭಾವ ಆ ರೀತಿಯಾಗಿತ್ತು. ಅದನ್ನು ಅರಿತು ಬಲ್ಲ, ಪೂರ್ವಪರಿಚಯವಿದ್ದ ಅವರು ನನ್ನ ಸಂಕೋಚ, ಗುಮ್ಮನ ಗುಸುಕು ಸ್ವಭಾವ ಯಾವುದನ್ನೂ ಅನ್ಯಥಾ ಭಾವಿಸುತ್ತಿರಲಿಲ್ಲ.

ಅಲ್ಲೇ ಇಟ್ಟ ವಿರಾಮ ಖುರ್ಚಿಯೊಂದರಲ್ಲಿ ವಿರಾಜಮಾನನಾಗುತ್ತ ಶಿವರಾಮ ಹೇಳಿದ: “ಕ್ಯಾ ತಾ. ಯಾರ, ನಾ ಹೇಳಿದ್ದು ಸೆಂಟಪರಸೆಂಟ ಖರೇ ಆಗೇದ. ಈ ತಿಂಗಳ “ತ್ರಿವೇಣೀ” ನೋಡಿದೇನು? ನಿನ್ನ ಪುಸ್ತಕದ ವಿಮರ್ಶಾ ಬಂದದ. ‘ಜಿಸ್ಟ ಟೆಕ್ನಿಕ’ ‘ಸಿದ್ಧ ಹಸ್ತ ಲೇಖಕ’ ಎಲ್ಲಾ ಖರೇ. ಆದರ ಪವಾಡದ ರೀತಿ, ವಸ್ತು ಮಾತ್ರ ಪಟಾಸೂ ಹಾಂಗ ಇಲ್ಲಾ. ಇದು Age of reasoning. ಪವಾಡ ಕಾಲೂರಿ ನಿಂದ್ರು ಹಾಂಗ ಇಲ್ಲಾ ಅಂತ ಬರದಾನ. ಜಂಗೀ ಎರಡ ಪಾನ ಆದ. ನಾ ಹೇಳತಿದ್ದದ್ದೂ ಇದನ್ನs. ನಾವ್ ಡಂಟರ ಜಾತೀ ಜನಾ. ನಮ್ಮನ್ನ್ಯಾರ ಕೇಳಬೇಕು. ಈಗರs ನಿನಗ ನನ್ನ ಮಾತು ಪಟಾಸಬೇಕು.”

“ಪಟಾಸು ಮಾತಿಗೆ, ಇದಕ್ಕ ಏನೂ ಸಂಬಂಧ ಇಲ್ಲಾ. ಪವಾಡಾ, ಪವಾಡಾ ಅಂತ ಅಂತೀರಿ. ನಡದದ್ದನ್ನ, ನೋಡಿದ್ದನ್ನ ನಾ ಕಂಡು, ಕೇಳಿದ್ಹಾಂಗ ಬರದರ ಅದರಾಗ ಏನ ಬಂತು ಪವಾಡಾ. ಅರಿಸಿಕೊಂಡ ವಸ್ತು ಪವಾಡ ಅಂತೀರೇನು? ನಾ ಕಣ್ಣಾರೆ ನೋಡಿದ್ದೆ, ಕೇಳಿದ್ದೂ ವಿಚಾರಕ್ಕ, ಬುದ್ಧಿಗೆ ಒರೀ ಹಚ್ಚಿ ನೋಡಿದ್ದೆ, ಏನೂ ಬರೆಯೂ ಜಾತಿಗೆ ಸೇರಿದಂಥಾ ಅಲ್ಲಾ ಅನ್ನೂದರೆ ನಿನಗ ಪಟಾಸೇದೋ ಇಲ್ಲೋ? ಅದನ್ನ ಹೇಳು. ಇಷ್ಟs ಅಂತೀಯಲ್ಲಾ, ನಾನು ಅನುಭವಿಸಿದ ಒಂದು ಪ್ರಸಂಗ, ಅದ್ಭುತ ಚಮತ್ಕಾರ ಬರದ ಇಟ್ಟೇದ್ರಿ, ಇನ್ನೂ ಯಾರಿಗೆ ತೋರಿಸಿಲ್ಲಾ; ಸುಧಾಗ ಸುದ್ದೀ ಇದರ ಕಲ್ಪನಾ ಇಲ್ಲಾ. ಆಕೀಯಿಂದ ಏನಾರs ಮುಚ್ಚಿಟ್ಟಿದ್ರ ಇದೊಂದು

ಮಾತ್ರ ಖರೆ. ಈ ಕಥೀ ಕೇಳಿದರ, ನಿನ್ನ ಪವಾಡ ಅನೂ ಭಾವನಾ ಗಾಳಿಗೆ ಹಾರಿ ಹೋಗತದ. ನೀನೂ ನನ್ನ ಮಾತ ಒಪಗೊಂಡು ಪವಾಡದ ಜಾತಿಗೆ ಸೇರತೀದಿ.''

ಅಷ್ಟರಲ್ಲಿ ಕೋಣೆಯ ಬಾಗಿಲು ಬಳಿ ನಿಂತು ಸುಧಾ ತ್ರಿಮೂರ್ತಿಗಳನ್ನು ನೋಡಿ, ಲಘು ಹಾಸ್ಯ ಬೀರಿ "ಇದಕ ಏನು, ಕಾದಂಬರೀ ಬರೆಯೂ ನಿಶ್ಚಯಾ! ಸಂಪ ಹರಟಿ ನಡದದ. ಭಾವಜೀ ನೀವು ಬಂದ್ರಿ, ಅವರ ಸಮಾಧಿ ಭಂಗ ಆತು. ಇನ್ನೇನು ಬೆಳತನಕಾ ಕಚೇರೀ ಮಾತಕ. ನಾ ಹೋಗತೇನಿ ಶೋಕ್ಕ; ನೆರಿಮನಿ ವಿಮಲಕ್ಕ ಬರತಾರ ಹಾಲು ನ್ಯಾರಿ ಬಂದ ಮ್ಯಾಲ ಹಾಲಿಷ್ಟು ತಗೊಂಡು ಕಪಾಟಿನ್ಯಾಗ ಇಡ್ರಿ. ಆ ಮ್ಯಾಲ ಬೇಕಾರ ಇಲ್ಲೇ ಕೂಡ್ರಿ, ತಿರಿಗ್ಯಾಡಲಿಕ್ಕೆ ಹೋಗ್ರಿ, ನಿಮ್ಮ ಮರ್ಜಿ.''

"ವೈನೀ, ನಾವೇನಿಂದ ಹೊರಗ ಹೊರಡೂ ಹಾಂಗ ಇಲ್ಲಾ. ಯಜಮಾನರ "ಕಥಾ ಕಾಲಕ್ಷೇಪ'' ಅದ. ನೀವೂ ಇವ್ರ ನೆಟ್ಟಗಾಗತಿತ್ತು. ನಿಮ್ಮ Programme ಠರಾಸಿಧಾಂಗೇ ಕಾಣಸ್ತದ. ಆತು ಹೋಗಿ ಬರ್ರಿ. ತಿರಗಿ ನೀವು ಬರೂತನಕಾ ನಾವೇನ ತಳಾ ಕಿತ್ತಾಂಗಿಲ್ಲಾ. ಶನಿವಾರ ಫರಾಳದ ಬೇಜಿಮೀನೂ ಇಲ್ಲೇ ಅಂತ ಠರಾಸಿಗೊಂಡೇ ಬಂದೇವಿ. ನೀವ್ ಬರೂ ಹೊತ್ತಿಗೆ ಎಲ್ಲಾ ತಯಾರ ಮಾಡಿ ಇಟ್ಟಿರಿತೇವು.''

"ನೀವಿದ್ದ ಮ್ಯಾಲ ತೀರಿತು. ಕಾಳಜೀ ಮಾಡೂ ಕಾರಣಕ ಇಲ್ಲಾ. ಹಾಲ ಮಾತ್ರ ಕಪಾಟಿನ್ಯಾಗ ಇಡಲಿಕ್ಕೆ ಮರೀಬ್ಯಾಡ್ರಿ, ಹರಬ್ಯಾಗ ಕೂತ್ರೆಂದ್ರ ಬೆಕ್ಕಿನ ಪಾಲಾ, ನಿಮ್ಮ ಚಹಾಕ್ಕ ಸೊನ್ನಿ.''

"ನೀವು ಕಾಳಜೀ ಬಿಡ್ರಿ ಅಂದ್ನೆಲಾ. ಗಣಪೂನ್ನ ಖಡೀ ಕಾಯ್ಲಿಕ್ಕೆ ಕೂಡಸ್ತೀನಿ, ಆತಿಲ್ಲೋ.''

ಸುಧಾ, ನನ್ನ ಕಡೆಗೆ ನೋಡಿ, "ನೀವು ಬರದಿದ್ದರ ಅಷ್ಟೇ ಹೋತು. ಪಿಸ್, ಕಾದಂಬರೀ ಬರಿಯೂದಕರ ಭಾವಜೀ ಕಲ್ಲ ಹಾಕಿದರು. ಅದು ಆಗೂದಕ ಹೀಂಗ'' ಎಂದು ಹೇಳಿ ನಗುತ್ತ, ಅಂದಿನ ಫಲಾಹಾರ ಸಿದ್ಧತೆಯ ಭಾರವನ್ನು ನಮ್ಮ ಮೇಲೆ ಹಾಕಿ, ಸಿನೇಮಾಕ್ಕೆ ಹೋದಳು.

ಕೋಣೆಯಲ್ಲಿ ನಾವು ಮೂವರೇ. ಡಬ್ಬಿಯಿಂದ ಒಂದೊಂದು ಸಿಗರೇಟು ತೆಗೆದು ಹಚ್ಚಿದೆವು. ನನ್ನ ಅನುಭವದ ಕತೆಯನ್ನು ಕೇಳುವ ಔತ್ಸುಕ್ಯ,

ಶಿವು, ಗಣಪತಿ ಇಬ್ಬರ ಮುಖದಲ್ಲಿಯೂ ಮೂಡಿದ್ದು ಕಂಡುಬರುತ್ತಿತ್ತು. ಕತೆ ಹೇಳುವ ಉತ್ಸಾಹ ನನ್ನಲ್ಲಿ ಅಷ್ಟಾಗಿರದಿದ್ದರೂ ನನ್ನ ಅನುಭವ ಪಾಪದ ವಲ್ಲವೆಂದು ಸಿದ್ಧಿಸುವ ಚಾಪಲ್ಯ ಮಾತ್ರ ಇತ್ತು.

"ಶಿವೂ, ಬಾಯಿಂದ ಹೇಳೂದೇನು? ಹ್ಯಾಂಗಾದ್ರೂ ಬರದಽ ಇದ್ದೀನಿ, ಓದೇ ಬಿಡತೇನಿ. ಕೇಳೂ ಶ್ರೋತಾನ ಕೆಲಸ ನಿಮ್ಮದು. ನಾ ಹೇಳಿದ್ರೂ ಅಷ್ಟಽ, ಓದಿದ್ರೂ ಅಷ್ಟಽ, ಹ್ಯಾಂಗಂತೀ ಹಾಂಗ." ನಾನೆಂದೆ.

"ಓದೂದಽ ಠೀಕಾ, ಪಾಂಕ್ತ ಆಗಿ ಎಲ್ಲಾ ತಿಳೀತದ. ಓದೇ ಬಿಡು." ಗಣಪತಿ ಹೇಳಿದ.

ನಾನು ಎದ್ದು ಕಪಾಟಿನಲ್ಲಿ ಇಟ್ಟ ಬರವಣಿಗೆಯ ಕಟ್ಟಿನಿಂದ, ಕತೆಯನ್ನು ತೆಗೆದು ಓದಲನುವಾದೆ.

"ಆ ಮಾತಿಗೆ ನಾಲ್ಕು ವರುಷವಾಗುತ್ತ ಬಂದಿವೆ. ಅದೇ ಆಗ ನನಗೆ ಕಮೀಷನರ ಕಚೇರಿಗೆ ಬದಲಿಯಾಗಿತ್ತು. ಅರಿಯದ ಊರಲ್ಲಿ, ಅಷ್ಟು ಬೇಗನೇ ಮನೆ, ಕೊನೆಗೆ, ಒಂದೆರಡು ಕೋಣೆಯ ಬ್ಲಾಕ್ಕು ಸಿಗುವದು ಕೂಡ ದುಸ್ತರ. ಇಲ್ಲಿ ಬಂದನಂತರ ಅಲ್ಲಿ, ಇಲ್ಲಿ ಅಷ್ಟಿಷ್ಟು ಪರಿಚಯದವರಲ್ಲಿ ಬಿಡಾರು ಹಾಕದೆ, ನೇರವಾಗಿ "ಮಾಧವ ನಿವಾಸ"ದಲ್ಲಿ ಒಂದು ಕೋಣೆ ಹಿಡಿದು ಬೀಡು ಬಿಟ್ಟೆ. ಊಟ, ತಿಂಡಿ, ತೀರ್ಥ ಎಲ್ಲಾ ಅಲ್ಲೇ ಆಗುತ್ತಿತ್ತು. ಹಣ ಹೆಚ್ಚಾಗಿ ಹೋದರೂ ಸರಿ, ಯಾರ ಭಿಡೆ-ಮುರವತ್ತು ಇಲ್ಲದ ಸಮಾಧಾನವಿತ್ತು.

ಶ್ರೀ ಸೋರಟೂರ ಎಂಬವರು ಆಗ ನಮ್ಮ ಹೆಡ್ ಕ್ಲಾರ್ಕ. ನನ್ನ ಹಾಟೇಲವಾಸದ ಕತೆ ಕೇಳಿದರು. "ಡಬಲ್ ಗ್ರಾಜ್ಯುವೇಟ್ ಹುಡುಗ. ಇಂದಿಲ್ಲ ನಾಳೆ, ಸೂಮುಲೀ ಮಾಡುವವ. ನಸೀಬು ತೆಗೆದರೆ ಡಿ. ಡಿ. ಸಿ; ಡೀ. ಸೀ. ಕೂಡ ಆದಾನು. ಇನ್ನೂ ವರ ಮಾಲಿಕೆಯಲ್ಲಿ ಇದ್ದವ; ಇಂಥ ಒಂದು ಅಮೂಲ್ಯ ವಸ್ತು-ಅಸ್ತ್ರ, ಬತ್ತಳಿಕೆಯಲ್ಲಿ ಇರಲಿ, ನೋಡಿ ಪ್ರಯೋಗ ಮಾಡಿದರಾಯಿತು" ಎಂಬ ದುಂದಾಲೋಚನೆಯಿಂದಲೋ ಬೇರೆ ಇನ್ನಾವ ಕಾರಣದಿಂದಲೋ ಏನೋ, ನನ್ನನ್ನು ತೀರ ಆಪ್ತ ಸ್ವಕೀಯನಂತೆ ಭಾವಿಸಿ, ಆದರಿಸಿ "ಖಾನಾವಳೀ ಊಟ ಹೊಟ್ಟೆಗೆ ಅನ್ನವಲ್ಲ, ನೆತ್ತಿಗೆ ಎಂಣೆಯಲ್ಲ ನೀವು ಬೆಳೆದು-ಬಾಳುವ ಜೀವನ. ಮನೆ-ಮಾರು ಮಾಡಿಕೊಂಡು, ಪ್ರೋಕ್ತ

ರಂತೆ ಇರುವದರಲ್ಲಿ ದೊಡ್ಡಿಸ್ತನ ಇದೆ. ಮನೆಗೇನು ಬರಗಾಲ; ನಾನು ಹಾಂ, ಅಂದರೆ, ಅದು ಹೂಂ ಅಂದೀತು. ಹೇಳಿರಿ ಎಷ್ಟರಲ್ಲಿ ಮನೆ, ಬ್ಲಾಕ್, ಏನು ಬೇಕು? ಯಾವಾಗ ಬೇಕು? ಮನೆಯುವರನ್ನು ಕರೆಸಿ ಬಿಡಿರಿ” ಧೈರ್ಯ ಹೇಳಿದರು.

“ಮನೆಯುವರನ್ನು ಕರೆಸುವ ಭಾನಗಡಿ ಇಲ್ಲ. ಇದ್ದವ ನಾನೊಬ್ಬನೇ, ಏಕಾಕಿ” ನಾನೆಂದೆ. ಅವರು ಹಿರಿಯರು ವಯಸ್ಸಿನಲ್ಲಿ; ವರಿಷ್ಠರು, ಕಚೇರಿಯಲ್ಲಿ. ಆ ತಾರತಮ್ಯ ಭಾವ ಕಾಯಲಿಕ್ಕೆ ಬಿಚ್ಚಿ ಹೇಳಲಿಲ್ಲ, ನಾನು ಮುಶಾಫೀರ—ಸೋಟಭಾಯಿ” ಎಂದು. ಅವರು ಮರುದಿನ, ಈಗ ನಾನಿದ್ದ ಮನೆಯನ್ನು—ಮೂರು ಕೋಣೆಯ ಬ್ಲಾಕ್ಕನ್ನು ತೋರಿಸಿ, ಒಪ್ಪಿಸಿ-ಸಂಜೆಯ ಒಳಗಾಗಿ, ಇಲ್ಲಿ ಬಿಡಾರ ಬಿಡುವಂತೆ ಮಾಡಿದರು.

ನಾನು ಹಿಡಿದ ಬ್ಲಾಕ್ ಔಟ ಹೌಸ. ಮುಖ್ಯ ಕಟ್ಟಡ—ಎರಡು ಮಜಲಿನದು—ನನ್ನ ಬ್ಲಾಕ್‌ನಿಂದ ಹತ್ತೆಂಟು ಹೆಜ್ಜೆಯ ಅಂತರದಲ್ಲಿ. ಆ ಮನೆಯ ಬಾಗಿಲು-ಕಿಟಕಿ ಎಲ್ಲಿ ನಿಂತುನೋಡಿದರೂ ನನ್ನ ಕೋಣೆಯಲ್ಲಿ ನಡೆದದ್ದು,—ಇಲ್ಲಿ ಕುಳಿತು ನೋಡಿದರೆ, ಅಲ್ಲಿ ನಡೆಯುವದು ಕಾಣುವಂತೆ ರಚನೆ ಇತ್ತು. ಮನೆಯ ಯಜಮಾನರು ಶ್ರೀ ಸೊರಟೂರರ ಪರಮ ಸ್ನೇಹಿತರು. ಇಷ್ಟು ದಿನ ಯಾರಿಗೂ ಕೊಡದ ಈ ಬ್ಲಾಕ್ಕನ್ನು ನನಗಾಗಿ ಕೊಟ್ಟರು. ೩೫ ರೂ. ಅಲ್ಪ ಬಾಡಿಗೆಯಲ್ಲಿ ಇಂಥ ಸುಂದರ ಬ್ಲಾಕ್ ಸಿಗುವದೇನು ಸಹಜ ಸಾಧ್ಯವಾದ ಕೆಲಸವಾಗಿರಲಿಲ್ಲ. ಈ ಜಾಗ ಕೊಡಿಸಿದ ಬಗ್ಗೆ ಶ್ರೀ ಸೊರಟೂರರನ್ನು ನಾನು ಮತ್ತೆ ಮತ್ತೆ ಹೊಗಳುತ್ತಿದ್ದೆ. ಅವರೂ ಕೂಡ ದೇಶಾವರೀ ನಗೆಯನ್ನು ನಗುತ್ತ, ನನ್ನ ಹೊಗಳಿಕೆಯನ್ನು ಸ್ವೀಕರಿಸಿದರೂ ಹಾಗೆ ತೋರಗೊಡದೆ, ತಾವು ಮಾಡಿದ್ದು ಅಲ್ಪ; ಮಾಡಬೇಕಾದದ್ದನ್ನು ಮಾಡಿದೆ. ಅದರಲ್ಲೇನು ಮಹಾ—ಎಂದು ಮಾತು ಮರೆಸುತ್ತಿದ್ದರು.

ಅವರ ಮನೆಯೂ ಆಚೆಯ ಬೀದಿಯಲ್ಲಿ. ನನ್ನ ಬ್ಲಾಕ್ಕಿನ ಯಜಮಾನರ ಕಡೆಗೆ ಅವರದು ತಪ್ಪದೆ ದಿನಾಲು ಹರಕೆ ಇದ್ದದ್ದೇ. ಹಾಗೆ ಬಂದಾಗಲೆಲ್ಲ, ನನ್ನ ಕಡೆಗೂ ಬಂದು ಕ್ಷೇಮ ಸಮಾಚಾರ, ಹವಾಮಾನದ ವಿಚಾರ ಮಾತನಾಡಿ ಪ್ರಕೃತಿ ಸಂಬಾಳಿಸುವಂತೆ ಹೇಳಿ, ಆಸ್ಥೆ ಕಳಕಳಿ ತೋರಿಸಿ ಹೋಗುತ್ತಿದ್ದರು. ಕಚೇರಿಯಲ್ಲಿ ೧೧ ರಿಂದ ೫ ರ ವರೆಗೆ ಕೂಡಿರುವ

ರೀತಿ ಬೇರೆ ಅಲ್ಲಿಯ ವಾತಾವರಣ ಬೇರೆ. ಅಲ್ಲಿ ಅಷ್ಟು ಬಳಿಕೆ-ಸಲಿಗೆಗೆ ಅವಕಾಶ ಹೇಗೆ ದೊರೆಯಬೇಕು? ಅವರ ಕೂಡ, ಒಮ್ಮೊಮ್ಮೆ ಮನೆಯ ಯಜಮಾನರು—ನನ್ನ ಭಾವೀ ಮಾವನವರು—ಬರುತ್ತಿದ್ದರು. ಅವರ ನನ್ನ ಪರಿಚಯ ಮಾಡಿಸಿ, ಪರಿಚಯ ದಟ್ಟವಾಯಿತೆಂದು ತಿಳಿದನಂತರ ಸೊರಟೂರರು ಕ್ರಮೇಣ, ತಮ್ಮ ವಿಚಾರ ವಿನಿಮಯದ ಸರ್ವ ಭಾರವನ್ನೂ ನಮ್ಮ ಭಾವೀ ಮಾವನವರಿಗೆ ಒಪ್ಪಿಸಿ ತಾವು ಮಾತ್ರ ಕಡೆಗಾಗಿ ಬಿಟ್ಟರು. ಭಾವೀ ಮಾವನವರ ಸಖ್ಯ ಮೊದಲಾಯಿತು. ಈ ಸಖ್ಯದ ಬೀಜಾರೋಪಣದ ಶ್ರೇಯಕ್ಕೆ ಸೊರಟೂರರೇ ಬಾಧ್ಯರು.

ನನ್ನ ಊಟ ನಿತ್ಯ ಹೊಟೇಲಿನಿಂದ ಬರುತ್ತಿತ್ತು. ಹತ್ತು, ಹತ್ತೂ ಕಾಲು ಗಂಟೆಗೇ ಉಂಡು ಬಸ್ಸಿನ ದಾರಿ ಕಾಯುತ್ತ ನಿಲ್ಲದೆ ಗತಿಯಿರಲಿಲ್ಲ. ನಮ್ಮ ಭಾವೀ ಮಾವನವರು ಬ್ಯಾಂಕಿನಲ್ಲಿ ಮ್ಯಾನೇಜರ. ಅವರಿಗೂ ಅದೇ ಬಸ್ಸೇ ಗತಿ! ಹೀಗೆ ಹೋಗಿ ಬರುವ, ಕೂಡಿ ಓಡಾಡುವ ಬಳಕೆ ಹೆಚ್ಚಾಯಿತು. ರವಿವಾರ, ಸೂಟಿಯ ದಿನ, ಹೊಟೇಲಿನ ಊಟಕ್ಕೆ ಚಕ್ರಬಿದ್ದು, ಅಂದು ಮಾವನವರ ಮನೆಯಲ್ಲಿಯೇ ನನ್ನ ತೀರ್ಥ-ಪ್ರಸಾದವಾಗತೊಡಗಿತು

ಅವರ ಮನೆಯಲ್ಲಿಯೂ ಅಷ್ಟುದೊಡ್ಡ ಪಾಳ್ಯವಿರಲಿಲ್ಲ. ನನ್ನ ಬೀಗ—ಸುಧಾನ ಅಂಣ ಫರ್ಗ್ಯುಸನ್ನದಲ್ಲಿ ಫಿಜಿಕ್ಸ ಪ್ರೊಫೆಸರ್. ಹೆಂಡತಿ ಮಕ್ಕಳೊಂದಿಗೆ ಅವನು ಪುಣೆಯಲ್ಲಿ; ಇಲ್ಲಿ ಮಾವನವರು, ಸುಧಾ, ಸುಧಾನ ಚಿಕ್ಕ ತಮ್ಮ ದಾಮೂ,—ಇಷ್ಟೇ ಜನ. ತಾಯಿ ತೀರಿಕೊಂಡಾಗ ದಾಮೂ ಎರಡು ವರುಷದ ಕೂಸು. ಮನೆಯ ಭಾರವೆಲ್ಲ ಸುಧಾನ ಮೇಲೆಯೇ. ಅಡುಗೆಯಾಕೆ ಇದ್ದಳು. ಆಳು-ಕಾಳು ಇದ್ದರು. ತಾಯಿ ತೀರಿಕೊಂಡಾಗ ಸುಧಾನಿಗೆ ೧೫-೧೬ ವರುಷವಿರಬೇಕು. ಇಂಗ್ಲೀಷ ಆರನೇ ಎತ್ತೆಯಲ್ಲಿ ಓದುತ್ತಿದ್ದಳು. ತಾಯಿಯ ಅಕಾಲಿಕ ನಿಧನದಿಂದ ಮನೆಯ ಭಾರ, ಚಿಕ್ಕ ತಮ್ಮನನ್ನು ನೋಡಿಕೊಳ್ಳುವ ಭಾರ ಆಕೆಯ ಮೇಲೆ ಬಿದ್ದಿದ್ದರೂ ಮಾವನವರು ಅವಳ ಶಾಲೆ ಬಿಡಿಸಲಿಲ್ಲ. ಮ್ಯಾಟ್ರಿಕ್ ಮಾಡಿಸಿದರು. F. Y. ಮುಗಿದಿತ್ತು. ಆ ರಜೆಯ ದಿನಗಳಲ್ಲಿ ಅವಳಿಗೆ ಜ್ವರ ಬಂದಂತಾಗಿ ಟಾಯಫಾಡ್ ಆಯಿತು. ತುಂಬ ನಿಃಶಕ್ತಿ ಬಂತು. ಕಾಲೇಜ ಸುರುವಾದರೂ ಅದು ಕಡಿಮೆಯಾಗಲಿಲ್ಲ. ಒಬ್ಬಳೇ ಮಗಳು; ಇಂದಿಲ್ಲ ನಾಳೆ ಮದುವೆ

ಯಾಗಿ ಮಕ್ಕಳು-ಮರಿ ಸಂಸಾರ ಜಾಲದಲ್ಲಿ ತೊಡಕುವಾಕೆ. ಮುಂದೆ ಹೆಚ್ಚು ಕಲಿತೇನು ಮಾಡಬೇಕಾಗಿದೆ ಎಂದು ಮಾವನವರು ಅವಳನ್ನು ಕಲಿಯುಗೊಡಲಿಲ್ಲ. ಸುಧಾ, ಓದಿಗೆ ವಿರಾಮ ಹೇಳಿ, ಮನೆಯ ಮೇಲ್ವಿಚಾರಣೆಗೆ, ಚಿಕ್ಕ ತಮ್ಮನ ಪಾಲನೆಗೆ ನಿಂತುಬಿಟ್ಟಳು.

ಹಬ್ಬ ಹರಿದಿನಗಳಲ್ಲಿ, ಕಚೇರಿಗೆ ಬಿಡುವಿದ್ದ ದಿನ, ಮಾವನವರು ಆಗ್ರಹದ ಆಮಂತ್ರಣಕೊಟ್ಟು ಊಟದ ಪಂಕ್ತಿಗೆ ನನ್ನನ್ನು ಬಿಡುತ್ತಿರಲಿಲ್ಲ. ಅಷ್ಟು ಪ್ರೀತಿ, ಆದರ ತೋರಿಸಿ ಕರೆಯುತ್ತಿರುವಾಗ ನಕಾರ ಹೇಗೆ ಹೇಳಲಿ? ಅಂತೂ ನಾನು—ಅವರು ತೀರ ಹತ್ತಿರ ಹತ್ತಿರವಾಗತೊಡಗಿದೆವು. ಹೋಗಿ ಬರುವ ಬಳಕೆಯಿಂದ ಆತ್ಮೀಯತೆ ಬೆಳೆಯತೊಡಗಿತು. ಮಾವನರು ತಮ್ಮ ಮನೆತನದ ಸುದ್ದಿ, ತಾವು ಪಟ್ಟ ಕಷ್ಟನಿಷ್ಠುರದ ಕತೆ, ತಾಯಿಯನ್ನು ಚಿಕ್ಕಂದಿನಲ್ಲಿ ಕಳೆದುಕೊಂಡು, ಅನಾಥರಾದ ಮಕ್ಕಳನ್ನು ಬೆಳೆಸಿ ತಂದ ರೀತಿ—ಎಲ್ಲವನ್ನೂ ಕುರಿತು ಸಾದ್ಯಂತ ಪುರೋಚಿ ಓದಿದ್ದರು. ಇಬ್ಬರಿಗೂ 'ಓ ಝೋನ' ಸೇವನೆಯ ಚಟ. ಬೆಳಗಿನ ಐದು ಗಂಟೆಗೇ ಎದ್ದು, ರೇಸ್ ಕೋರ್ಸದ ಕಡೆಗೆ ಮೈಲೆರಡು ಮೈಲು ಸುತ್ತಾಡಿಕೊಂಡು ಬರುತ್ತಿದ್ದೆವು. ಸಂಜೆಯ ಮುಂದೆ, ರವಿವಾರ ದಿನ ಅಡ್ಡಾಡಲಿಕ್ಕೆ ಹೋದರೆ, ಒಮ್ಮೊಮ್ಮೆ, ಸುಧಾ ಕೂಡ ನಮ್ಮ ಜೊತೆಯಲ್ಲಿ ಬರುತ್ತಿದ್ದಳು.

ಒಂದು ದಿನ ಹೀಗೆ ಅಡ್ಡಾಡಿಕೊಂಡು ಬರುತ್ತಿದ್ದೆವು. ಸೊರಟೂರರ ಮನೆಯ ಹತ್ತಿರ ಬಂದಾಗ, ಮಾವನವರು, ಏನೋ ಕೆಲಸವಿದೆ, ತಾವು ಸೊರಟೂರರನ್ನು ಕಾಣಬೇಕು ಎಂದು ಹೇಳಿ, ನಮಗೆ ಮುಂದೆ ಸಾಗಲು ತಿಳಿಸಿದರು. ನಮ್ಮಿಬ್ಬರನ್ನೇ ಬಿಟ್ಟು ತಾವು ಸೊರಟೂರರ ಮನೆಗೆ ಹೋದರು.

ಸುಧಾ, ನಾನು ಇಬ್ಬರೇ ಆದೆವು. ಅಲ್ಲಿಯವರೆಗೆ ಹೀಗೆ ಒಂಟಿಯಾಗಿ ಇಬ್ಬರೇ ಸಂಧಿಸಿರಲಿಲ್ಲ. ಏನು ಮಾತಾಡುವದು? ಹೇಗೆ ಮೊದಲು ಮಾಡುವದು? ಯಾರು ಮೊದಲು ಮಾಡುವದು? ಇಲ್ಲಿಂದಲೇ ಪಂಚೀತಿ. ನಾನು ಮುಖೀನ. ಅಲ್ಲದೆ ಅದೇ ಮೊದಲು ಸಲ, ಅರಿಯದ ಒಬ್ಬ ಹರೆಯದ ಹೆಂಣು ಹುಡುಗಿಯ ಕೂಡ, ಪೂರ್ವ ಪರಿಚಯವಿರದೆ ಏನೆಂದು ಮಾತಾಡುವದು? ನನ್ನ ಬಾಯಿ ಕಟ್ಟಿತ್ತು. ಸುಧಾ ತಾನಾಗಿಯೇ ಈ ಅಸಹ್ಯ ಮೌನವನ್ನು ಮುರಿದು, "ಈಗ ಟಾಯಿಮ ಏನಾಗಿರಬೇಕು? ಏಳು—ಏಳೂವರೇ ಆಗಿರ

ಬೇಕಲ್ಲ! ” ಎಂದಳು. ಕೈಯಲ್ಲಿದ್ದ ಟಾರ್ಚ ಬಿಟ್ಟು, ಕೈಗಡಿಯಾರ ನೋಡಿದೆ. ಏಳು ಮೂವತ್ತೈದಾಗಿತ್ತು. ಸುಧಾನೂ ಬಗ್ಗಿ ಗಡಿಯಾರ ನೋಡಿದಳು. ಟಾರ್ಚಿನ ಪ್ರಕಾಶದಲ್ಲಿ ಕೇದಿಗೆಯ ವರ್ಣದ ಅವಳ ದುಂಡು ಮುಖ ಮಿಂದು ಪ್ರಕಾಶಮಾನವಾಗಿ ಕಾಣತೊಡಗಿತ್ತು. ನೀಳ ಜಡೆಯಲ್ಲಿ ಒಂದೆರಡು ಎಲೆಯ ನಡುವೆ ಅರೆ ಅರಳಿ ಮುಗಮುಗಿಸುವ “ಮೋಗರಾ” ಮುಡಿದಿದ್ದಳು. ಆ ಕಂಪು ಸೂಸಿ ಬಂತು. ಅವಳು ಗಡಿಯಾರ ನೋಡುತ್ತಿರುವಂತೆ, ಮುಖವೆತ್ತಿ ಒಂದು ಮಂದಹಾಸ ಸೂಸಿ, “ಬ್ಯಾಟ್ರಿ ಶೆಲ್ಲಿಗೆ ರೊಕ್ಕ ಬೀಳ್ತಾಂಗ ಕಾಣೂದಿಲ್ಲಾ. off ಮಾಡ್ರೆಲಾ. ನಾ ವ್ಯಾಳ್ಯಾ ನೋಡೂದು ಮುಗದು ಎಷ್ಟೊತ್ತಾಯಿತು. ಕಂಡಿಗೆ ಚಾಳೀಸ ಏನ ಇನಾ ಬಂದಿಲ್ಲಾ. ಈಗೇನ ಅಂಥಾ ವ್ಯಾಳ್ಯಾ ಆಗಿಲ್ಲಾ. ಅಂಣ ಇನ್ನ ಮನೀಗೆ ಬರೂದಂದ್ರ, ರಾತ್ರಿ ಒಂಬತ್ತೋ, ಹತ್ತೋ. ರಾಮೂಕಾಕಾನ ಜೋಡಿ ಕೂತನಂದ್ರ ತೀರಿತು—ಅಂವಗ ಹೊತ್ತು–ಗೊತ್ತು ಒಂದೂ ತಿಳಿಯುಹಾಂಗಿಲ್ಲಾ. ನಾವರe ಇಷ್ಟ ಲಗೂನ ಮನೀಗೆ ಹೋಗಿ ಏನ ಮಾಡಬೇಕಾಗೇವ ? ಹೀಂಗa ಇನ್ನೊಂದು ಅರ್ಧ ತಾಸು ಅಡ್ಡಾಡಿ ಬರೂಣ ನಡೀರಿ—ಬೇಕಾರ ?”

ಅಂಣ–ಅವಳ ತಂದೆ. ಅವರನ್ನು ಆಕೆ ಹಾಗೆ ಸಂಬೋಧಿಸುತ್ತಿರುವದು. ರಾಮೂಕಾಕಾ–ಶ್ರೀ ಸೊರಟೂರರು.

ನನಗೂ ಅಷ್ಟೇ ಬೇಕಾಗಿತ್ತು. ಇಷ್ಟು ಬೇಗ ಮನೆಯನ್ನು ಸೇರಿ–ಖಾನಾವಳಿಯ ಡಬ್ಬಿಯ ದಾರಿಕಾಯುತ್ತ ಬಕನಂತೆ ಕೂಡುವದು ಬೇಡವಾಗಿತ್ತು. ಸುಧಾನ ಮಾತಿಗೆ, ಬಿನ್ನಹಕ್ಕೆ ಒಪ್ಪಿದೆ. ಅಂತೂ ಅಂದು, ಅದೇ ಮೊದಲ ಸಲ, ನಾನು–ಸುಧಾ, ಇಬ್ಬರೇ ಅಷ್ಟು ದೂರ, ಎಷ್ಟು ದೂರವೋ ಕೇಳಬೇಡಿ, ಅಷ್ಟು ಏಕಾಂತವಾಗಿ ತಿರುಗಾಡಿಕೊಂಡು ಬಂದದ್ದು; ಪರಿಚಯ ಮಾಡಿಕೊಂಡದ್ದು.

ಮನೆಗೆ ನಾವು ತಿರುಗಿ ಬಂದಾಗ ಮಾವನವರು ಇನ್ನೂ ಬಂದಿರಲಿಲ್ಲ. ಸುಧಾ ಮನೆಗೆ ಹೋಗದೆ, ನೇರವಾಗಿ ನನ್ನ ಕೋಣೆಗೇ ಬಂದಳು. ಅಲ್ಲೇ ಇದ್ದ Book rack ನಿಂದ ಪುಸ್ತಕ ಚಾಳಿಸತೊಡಗಿದಳು. ನನಗೆ ಚಹದ ತಲಬಾಯಿತು. ಚಹ ತಯಾರಿಸಲೆಂದು ನಾನು ಒಳಗೆ ಹೋಗಿ ಸ್ಟೋವ್ ಹೊತ್ತಿಸಿ ಎಸರಿಡುತ್ತಿದ್ದೆ. ಸುಧಾ ಪುಸ್ತಕ ತಿರುವಿಹಾಕುತ್ತಿದ್ದಾಗ, ಒಂದು

ನೀಲೀ ಕವರಿನ ವಹಿಯನ್ನು ಹಿಡಿದುಕೊಂಡು, ಒಳಗೇ ಬಂದು ಬಿಟ್ಟಳು. ಅವಳ ಕರಗತವಾದ ಆ ನೀಲೀ ನೋಟಬುಕ್ಕು, ನನ್ನ "ಶಾಲ್ಮಲಿ" ಕವನ ಸಂಗ್ರಹದ ಅಚ್ಚುಪ್ರತಿ. ನನ್ನ ಬರವಣಿಗೆಯ ಗುಟ್ಟು ಅವಳಿಗೆ ರಟ್ಟಾಯಿತು. ಅದೇನೋ ಅಭಿಮಾನ ತುಂಬಿದ ಕಣ್ಣುಗಳನ್ನು ಅರಳಿಸಿ ಕೇಳಿದಳು: "ಹೂಂ- ನೀವೂ ಕಾಳಿದಾಸನ ಗೋತ್ರದವರನೂದು ಗೊತ್ತಾಗಿದ್ದಿಲ್ಲ ಬಿಡ್ರಿ. ಬರೇ ಕವಿತಾನಽ ಅವನೋ ಮತ್ತೇನಾರಽ ಬರದಿರೋ? ಇಂದ ಇದನ್ನ ನಾ ಓದಲಿಕ್ಕೆ ಒಯ್ಯಾಕಿ ಮತ್ತ. ಅಡ್ಡೀ ಇಲ್ಲಲಾ. ನನಗೂ ಕವಿತಾ ಅಂದರ ಹುಚ್ಚಾ. ಓದಲಿಕ್ಕ ಅಂ ಮತ್ತಽ. ನೀವೇನಽ ತಿಳಿಕೊಂಡೀರಿ— ಇವರೂ ಸಗೋತ್ರ ಅಂತ.'' ಎಲ್ಲವನ್ನೂ ಸುಧಾನೆ ಮಾತನಾಡಿ ಮುಗಿಸುತ್ತಿದ್ದಳು. ಚಹ ಕುಡಿಯುತ್ತಿರುವಾಗಲೇ, ಅವಳು ಹಸಿದ ನೋಟದಿಂದ ಪುಟ ತಿರುವಿ ಹಾಕುತ್ತಿದ್ದಳು.

"ಸುಧಾತಾಯೀ, ಅದು ಇನಾ ಪ್ರಿಂಟ ಆಗೂ ಪುಸ್ತಕಾ. ಈಗಽ ಇಷ್ಟ ನೋಡಿದರ ದೃಷ್ಟಿಗಿಷ್ಟಿ ಆದೀತು! ಭಾಳ ನೋಡಬ್ಯಾಡ್ರಿ."

"ಇದ್ನೋಡ್ರಿ, ಒಂದ ಮಾತ ಹೇಳ್ತೇನಿ. ನೀವು, ಸುಧಾತಾಯೀ ಸುಧಾತಾಯೀ, ಅಂತ ಮಾತ್ರ ಅನಬ್ಯಾಡ್ರಿ. ಸಾದಾ, ಸೀದಾ ಸುಧಾ ಅನ್ನರಿ. ತಾಯೀ, ಬಾಯೀ ಅಲ್ಲಿಕ್ಕೆ, ನಾ ಏನು ಮೂವತ್ತರ ಫಾಜೆ ಮುಟ್ಟಿದ ಮುದಿಕಿ ಅಲ್ಲಾ."

"ಅಷ್ಟ ಸಲೀಗೀಲೆ ಹ್ಯಾಂಗ ಕರಿಯೂದು ನೋಡ್ರಿ. ನೀವಽ ಅಪಾರ್ಥ ಮಾಡಕೋ ಬಾರದು."

"ಅಪಾರ್ಥ, ಅನರ್ಥ, ಏನೋ ಏನೋ? ನನಗ ಅದರ ಅರ್ಥನಽ ಆಗೂದಿಲ್ಲಾ. ನಮ್ಮವರೂ ಅಂತ ಒಮ್ಮೆ ಖಚೀತಾಗಿ ಅನಿಸಿತಂದ್ರಽ ನನಗೆ ಭೇದಭಾವ ಮಾಡಲಿಕ್ಕೆ ಸಂಕೋಚ ಆಗತದ. ನಾ ಒಂದಿಷ್ಟ ಬಿಚ್ಚ ಮನಸಿನಾಕೀ ಮತ್ತಽ. ವಟ ವಟಾ, ಮಾತು, ಇಲ್ದಽ ಇದ್ದರ ಜೀವ ಕಸಿವಿಸಿ ಅನಸತದ. ಅದನ್ನ ಮಾತ್ರ ನೀವ್ ಬ್ಯಾರೇ ಆಗಿ ಭಾವಿಸಬ್ಯಾಡ್ರಿ.''

ಅವಳ ಈ ಬಿಚ್ಚು ಮಾತಿನಿಂದ ನನ್ನ ಮನಸ್ಸಿನ ಸಂಕೋಚದ ಪರೆಯೂ ಹರಿದಂತಾಯಿತು. ಅಂದಿನ ಆ ಪರಿಚಯ, ಸ್ನೇಹ ನಮ್ಮ ಮಧುರ ಮಿಲನಕ್ಕೆ ಪೀಠಿಕೆಯಾಯಿತು. ತಾಸರ್ಧ ತಾಸು ನಾವು ಆ-ಈ ಮಾತಿನಲ್ಲಿ, ಸಾಹಿತ್ಯ ಚರ್ಚೆಯಲ್ಲಿ ಕಳೆದಿರಬೇಕು. ಮಾವನವರ ದನಿ ಕೇಳಿ

ಬಂತು. ಸುಧಾ, ನನ್ನ ಕವನ ಸಂಗ್ರಹ, ಅದರ ಕೂಡ ನನ್ನ ಹೃದಯ, —ಒಂದನ್ನು ನನ್ನ ಸಮ್ಮತಿಯಿಂದ, ಇನ್ನೊಂದನ್ನು ನನಗರಿಯದಂತೆ— ಸೆಳೆದುಕೊಂಡು ಹೋದಳು.''

ನಾನು ಓದುತ್ತಿರುವದು ಇಲ್ಲಿ ಮುಕ್ತಾಯವಾದಾಗ ಗಣಪತಿ ನಡುವೆ ಬಾಯಿ ಹಾಕಿದ—" ನೀ ಓದೂ ಕಥಿ ಪುಣ್ಯಾದಿಂದ, ನಿನ್ನ ಭಾನಗಡೀಯರೇ ಗೊತ್ತಾತು. ಇಷರ ಸುಳುವು ಸುದ್ದೀ ಹಚ್ಚಿಗೊಟ್ಟಿದ್ದಿಲ್ಲಲಾ ನಮಗ ? ಏನೋ ನಿಮ್ಮದು ಸಹಜಾ-ಸಹಜೀ ಜಮಾಸಿರಬೇಕಂತ ಮಾಡಿದ್ವಿ."

ಶಿವರಾಮ ಬಲದ ಅಂಗೈಯನ್ನು ಬಿಚ್ಚಿ ನೋಡುತ್ತ " ನಾಕ ವರ್ಷ ಕಾಲೇಜಾತು. ೩-೪ ವರುಷ ನವಕರೀ ಆತು. ಪುಣೇದಂಥಾ ದೊಡ್ಡ ಊರಾಗ ಅಖಂಡ ನಾಲ್ಕವರಷ ತಗದದ್ದಾತು. ಏನಪಾ, ಧನ್ಯ, ನಮ್ಮ ಹಸ್ತ ಸಾಮುದ್ರಿಕಾ. ಹೆಂಡಿನ ಗೆರೀ ಅನೂದು ಆಳಸೇ ಹೋಧಾಂಗ ಕಾಣಸ್ತದ. ಒಂದರs ಹೀಂಗ ಗಂಟ ಬಿದ್ದೂ ಅಂತೀಯೇನು? ದೇವರಾಣಿ ಮಹಾರಾಣಿಯಾ ದೇವರಾಣಿ. ಆದಿರ್ಲೆಪಾ, ನೀ ಏನ ಪವಾಡ ಹೇಳಾಂವಿದ್ದಿ? ಇದs ನಿನ್ನ ಮಿಲನದ ಪವಾಡಯೇನ ಮತ್ತs."

" ಇದೂ ಅದಕ್ಕ ಪ್ರಸ್ತಾವನಾ. ಈಗ ಪೀಠೀಕಾ ಸಂಧೀ ಸಮಾಪ್ತ ಆತು.''

" ಸಂಧೀ ಮಂಗಳಾದದ್ದಕ್ಕ ಮಂಗಳಾರತಿ ಆಗಲಿ. ಗಣಪ್ಪೂ, ಬಟನ್ ಒತ್ತಿ ದೀಪಾ ಹಚ್ಚು. ಧೂಪಾರತಿ ತಾರಪಾ—ತಗೀ ಸಿಗರೇಟು.''

ಗಣಪತಿ ದೀಪಹಚ್ಚಿದ. ಡಬ್ಬಿಯಿಂದ ಸಿಗರೇಟು ತೆಗೆದು ಹಂಚಿದ. ಮೂವರೂ ಹೊಗೆನುಂಗಿ ಬಿಡುತ್ತ ಕುಳಿತಾಗ ಹಾಲಿನಾಕೆ ಬಂದಳು. ಹಾಲು ಹಾಕಿಸಿಕೊಂಡು, ಮತ್ತೆ ನಾನು ಕತೆಯನ್ನು ಓದತೊಡಗಿದೆ.

ಸುಧಾನ ಪ್ರತ್ಯಕ್ಷ ಪರಿಚಯ, ಮಾತು-ಕತೆಯಾಗಿ, ಅವಳು ನನ್ನ ಕವನ ಸಂಗ್ರಹವನ್ನು ಒಯ್ದ ರಾತ್ರಿ ನಾನು ಬಹಳ ಸುಖವಾಗಿ, ಉಲ್ಲಸಿತ ವಾಗಿ ಇದ್ದೆ. ಇಂಥ ಅನುರೂಪ ಕನ್ಯೆ, ನನ್ನಲ್ಲಿ ಅಭಿಮಾನ ತೋರಿದ್ದಕ್ಕೆ ನನ್ನ ಭಾವನೆಗೆ ಕೋಡು ಮೂಡಿದಂತಾಗಿತ್ತು. ' ಸುಧಾ, ನಾನು ಒಂದಾ ದರೆ, ಅವಳು ನನಗೆ ದೊರೆತರೆ, ಹಾಲು-ಸಕ್ಕರೆ ಬೆರೆತಂತಾದೀತು; ಜೀವ ಸುಖಮಯವಾದೀತು ' ಎಂಬ ಕನಸು ಕಾಣುತ್ತ, ಧೇನಿಸುತ್ತ ಅಡ್ಡಾದೆ. ಆ ದಿವ್ಯ ತಂದ್ರಿಯಲ್ಲಿರುವಾಗ, ಯಾವತ್ತು ನಿದ್ರೆ ಹತ್ತಿತೋ ಗೊತ್ತಾಗಲಿಲ್ಲ.

ನಿದ್ರೆಯಲ್ಲಿ, ಗಂಧರ್ವ-ಕಿನ್ನರರ ನಾಡು ಸುತ್ತಿ, ಬಳಸಿ ಬಂದೆ. ಎಂಥೆಂಥ ರಮ್ಯ ಅನುಭವಗಳನ್ನು ಅನುಭವಿಸಿದೆನೋ ಹೇಳಲಾರೆ. ಬೆಳಗಿನ ಜಾವಕ್ಕೆ ಸಕ್ಕರೆ ಜಂಪು ಹತ್ತಿರಬೇಕು. ತುಂಬ ಗಾಢನಿದ್ದೆಯೂ ಅಲ್ಲ; ಅಂಥ ಜಾಗ ರವೂ ಅಲ್ಲ. ಸುಷುಪ್ತಿಯಲ್ಲಿ ಜೀವ ಜೀಕುತ್ತಿರಬೇಕು; ರಮಮಾಣನಾಗಿರ ಬೇಕು.

ಸುಧಾ ಈಗ ಕಣ್ಮರೆಯಾಗಿದ್ದಳು. ಅವಳ ಬದಲಿಗೆ, ಅವಳದೇ ರೂಪ, ಅವಳದೇ ಮಾಟ ಹೊತ್ತ ಒಬ್ಬ ವಯಸ್ಕ—ತುಂಬುಮುತ್ತೈದೆ ಮಾತ್ರ ಕನಸಿನಲ್ಲಿ, ಸುಷುಪ್ತಿಯ ಆ ಜೀವನದ ಅವಸ್ಥೆಯಲ್ಲಿ ಮನಸ್ಸಿನೆಮರು ಮೂಡಿ ನಿಂತಳು. ಮಾತಿಲ್ಲ, ಕತೆಯಿಲ್ಲ. ಕಂಣಲ್ಲಿ ತುಂಬು ದೈನ್ಯ. ಏನೋ ಬೇಡಿ ಪಡೆಯುವ ಆತುರ. ಆ ಮುತ್ತೈದೆಯೂ ಮೌನ, ನಾನೂ ಸ್ತಬ್ಧ-ಮೂಕ! ಇಂಥ ಹೆಂಣುಮಗಳನ್ನು ಮೊದಲೆಲ್ಲಿಯೂ ಕಂಡ ನೆನಪು ಸುಳಿಯ ಲೊಲ್ಲದು. ಎಷ್ಟು ಧೇನಿಸಿಕೊಂಡರೂ ಹೊಳೆಯಲೊಲ್ಲದು. ನನ್ನ ಮೌನ ದಿಂದ ಅವರಿಗೇನು ಅನಿಸಿತೋ ಏನೋ ? ಅವರು ಮೂಡಿ ಬಂದಂತೆ, ಮೆಲ ಮೆಲನೆ ಹಿಂದೆ ಸರಿದು ಹೊರಟರು. ಆ ಆಕೃತಿ ಸುಧಾನ ಮನೆಯ ಪಾವಟಿಗೆ ಗಳನ್ನು ಏರಿ, ತಲೆಬಾಗಿಲಿನಿಂದ ಒಳಗೆ ಹೋದ ಭಾಸವಾಯಿತು. ಆಕೃತಿ ಮರೆಯಾದಂತೆ ತಟ್ಟನೆ ಎಚ್ಚರವೂ ಆಯಿತು. ಯಾಕೋ ಕಾಣೆ! ಮೈ ಬೆವೆತು ಹಿಮವತ್ ಪಿಂಡದಂತೆ ತಂಣಗಾಗಿತ್ತು. ಏಳುವ ಶಕ್ತಿಯೂ ಉಡು ಗಿತ್ತು. ಗಂಟಲಾರಿಹೋಗಿತ್ತು.

ಆ ತಂದ್ರಿಯಲ್ಲಿ ನಾನು ಅವರನ್ನು ಕಂಡದ್ದು ಇದೇ ಮೊದಲ ಸಲ.

ನಾನು ಯಾರೊಡನೆಯೂ ಈ ಅನುಭವದ ಪ್ರಸ್ತಾಪ ಮಾಡಲಿಲ್ಲ. ನನ್ನ ಸುಧಾನ ಪರಿಚಯ ಗಾಢವಾಗಿ ಪ್ರೀತಿಗೆ, ಅನುರಾಗಕ್ಕೆ ತಿರುಗತೊಡ ಗಿತ್ತು. ನನ್ನ ಕವಿತೆ ಅವಳಿಗೆ ತುಂಬ ಮೆಚ್ಚಿಕೆಯಾಗಿತ್ತು. ನಾಲ್ಕೈದು ಕವನಗಳಿಗಂತೂ ಹೊಸ ಧಾಟಿ ಹಚ್ಚಿ ಹಾಡಿತೋರಿಸಿದ್ದಳು. ಅವಳು ಹಾಡುವ ರೀತಿಯಲ್ಲಿ, ಧಾಟಿಯಲ್ಲಿ ನಾವೀನ್ಯವಿತ್ತು. ಕವನ ಸಚೇತನವಾಗಿ, ಜೀವಸ್ಪಂದಿಯಾಗಿ, ನಿಂತಂತೆ ಭಾವನೆಯಾಗುತ್ತಿತ್ತು. ನಾವಿಬ್ಬರೇ ತಿರು ಗಾಡಿಕೊಂಡು ಬರಲು ಹೋದಾಗ, ದೂರದ ದಿನ್ನೆಯ ಮೇಲೆ ಕುಳಿತು ಅವಳು, ನನ್ನ ಕವನ—“ಎನ್ನ ಮನೆಯಂಗಳದಿ ಮೂಡಿ ಬಾ ಚಂದ್ರಾ”

ಹಾಡುವಾಗ ನನಗೆನಿಸಿತು : ಅವಳು ಈಗಾಗಲೇ ನನ್ನ ಜೀವನದ ಅಂಗಳದಲ್ಲಿ ಮೂಡಿ ಬಂದಿದ್ದಾಳೆಂದು. ಎರಡು ಜೀವ-ಹೋಳು ಆ ಹೊತ್ತಿಗಾಗಲೇ ಒಂದಾಗಿದ್ದವು.''

ದೀಪಾವಳಿ ಬಂದಿತು. ಕಚೇರಿಗೆ, ರವಿವಾರದ ಸೂಟಿ ಜೋಡಿಸಿ, ನಾಲ್ಕು ದಿನ ಬಿಡುವು. ನಾನು ಹೇಳಿಕೇಳಿ ಮುಶಾಫಿರ, ಬಾವಾ. ನನ್ನವರೆನ್ನುವವರು ಯಾರಿದ್ದಾರೆ? ಆರತಿಯನ್ನು ಎತ್ತುವ, ತಮ್ಮನ ಅಂಣನ, ಆಹೇರಿ ಪಡೆಯುವ ಅಕ್ಕ-ತಂಗಿಯರಿದ್ದಾರೆಯೇ? ಅದನ್ನು ನೋಡಿ, ಸುಖಿಸುವ ತಾಯಿ ಇದ್ದಾಳೆಯೇ? ನಾನು ಇನ್ನೂ ಒಂದು ವರುಷದ ಕೂಸಿರುವಾಗಲೇ ತಂದೆ ಕಂಣುಮುಚ್ಚಿದರು. ಕಾಲೇಜಿನಲ್ಲಿ ಇದ್ದಾಗ, ತಾಯಿ ತೀರಿಕೊಂಡಳು. ಆಸ್ತಿ ಇತ್ತೆಂದು, ಬೆಳೆದು-ಬಾಳಲಿಕ್ಕೆ, ಕಲಿತು ಮುಂದೆ ಬರಲಿಕ್ಕೆ ಅನುಕೂಲವಾಯಿತು. ಇದು ನಮ್ಮ ಮಾವನವರಿಗೆ ನಾನು ಹೇಳಿದ್ದರಿಂದ ಗೊತ್ತಾಗಿತ್ತು. ಅವರು ಇದನ್ನು ನೆನೆದು, ಹಬ್ಬದ ಅಖಂಡ ಔತಣ ಕೊಟ್ಟು ಇಟ್ಟಿದ್ದರು. ಹೊಸ್ತಿಲಕ್ಕೆ ಆಮಂತ್ರಣದ ಅಕ್ಷತೆ ಹಾಕಿದ್ದರು. ದೀಪಾವಳಿಯಲ್ಲಿ ಎಲ್ಲಿಗೂ ಹೋಗುವಂತಿಲ್ಲವೆಂದು, ಸುಧಾ ಆಗಲೇ ವಚನ ಪಡೆದಿದ್ದಳು. ಮಾವನವರದು ನಿಮಿತ್ತ ಮಾತ್ರ ಆಗ್ರಹ. ಅವರಿಗೂ ಅನಿಸಿರಬೇಕು—ಇಲ್ಲೇನೋ ನೀರಾಡುತ್ತಿರಬೇಕು. ನನ್ನ ಒತ್ತಾಯ ಆಗ್ರಹ ಹಿರಿಯರೆಂಬ ಕಾರಣದಿಂದ ಮಾತ್ರ. ಅಲ್ಲದೆ ನಾನು ಹೇಳದೆ ಸುಧಾ ಹೇಳಿದರೆ ಅವರು ಒಪ್ಪಿಕೊಂಡು ನಿಲ್ಲುವದು ಸಾಧ್ಯವೇ—ಎಂದು.

ನರಕ ಚತುರ್ದಶಿಯ ದಿನ ಬೆಳಗಿನ ಐದು ಗಂಟೆಗೇ ಆರತಿಯ ಸಂಭ್ರಮ ಮೊದಲಾಯಿತು. ಸುಧಾನ ಅಂಣನೂ ಕುಟುಂಬ ಸಹಿತವಾಗಿ ಬಂದಿದ್ದ. ಅವನ ಹೆಂಡತಿ, ಮಕ್ಕಳು-ಮರಿಯಿಂದ, ಮನೆ ಗಜಿಬಿಜಿಸಿ ತುಂಬಿ ತುಳುಕುತ್ತಿತ್ತು. ಬಾಲ್ಯದಿಂದ ಒಂಟಿಯಾಗಿ, ತಬ್ಬಲಿಯಾಗಿ ಬೆಳೆದ ನನಗೆ ಈ ಸುಖ ನವೀನವಾಗಿ, ಚೇತೋಹಾರಿಯಾಗಿತ್ತು.

ಸುಧಾ ಅಂದು ನನಗೆ ಕಂಡ ಚೆಲುವಿನ ರೀತಿಯೇ ಬೇರೆ! ಮುಗಿಲ ತಿಳಿನೀಲಿ ವರ್ಣದ ಸೀರೆ, ಆ ಕೇದಿಗೆ ಬಂಣದ ತನುಕಾಂತಿಗೆ ತೀರ ಅನುರೂಪವಾಗಿ ಒಪ್ಪುತ್ತಿತ್ತು. ಜಡೆಯ ಹೆಣಿತ, ಹೂ ಮುಡಿದ ರೀತಿ-ಅದು ಬೇರೆ ಯಾರದೂ ಅಲ್ಲ- ಸುಧಾ Speciality. ಅವಳದೇ ಟ್ರೇಡಮಾರ್ಕ. ಸುಧಾ—

ಅವಳ ವೈನೀ ಆರತಿ ಎತ್ತಿದರು. ಒಬ್ಬರಿಗೊಂದು ಒಬ್ಬರಿಗೊಂದು ಹೇಗೆ ಉಡುಗರೆ ಮಾಡುವದು? ಆಗ ಬರಿಯ ಇಪ್ಪತ್ತೈದು ರೂಪಾಯಿ ಹಾಕಿದೆ ಊಟ ಮುಗಿದು, ಎಲ್ಲರೂ 'ಪಾನಸುಪಾರಿ'ಗೆ ಕುಳಿತಾಗ, ಸುಧಾನಿಗೆ ಒಂದು ಲಾಕೆಟ್ಟಿನ ಚೇನು, ಅವರ ವೈನೀಗೆ ಜರದ ಸೀರೆಯನ್ನು ಒಪ್ಪಿಸಿದೆ. "ಅರಿಷಿಣ ಕುಂಕುಮ ನೀವು ನೀವೇ ಹಚ್ಚಿಕೊಂಡು, ಇದನ್ನು ಸ್ವೀಕರಿಸ ಬೇಕು" ಎಂದು ಹೇಳಿದೆ. "ನಮ್ಮ ಭಿಡೇದಾಗ ಇರಬಾರದಂತ ಇಷ್ಟ ಆಹೇರಿ ಮಾಡಿದಿರಿ ಕಾಣಸ್ತದ" ಎಂದು ಮಾವನವರು ಹೇಳಿದರು.

ನೋಡ್ರಿ—ನಾನು ಅಕ್ಕಾ-ತಂಗೀ ಯಾರ ಸೌಭಾಗ್ಯನೂ ಪಡೀಲಾರದ ಬಂದ ದುರ್ದೈವಿ. ಅವರಿದ್ದರೆ, ಇಂದ ನನ್ನ ಹಬ್ಬ ಯಾವ ರೀತೀಲೆ ಆಗತಿತ್ತು ಅನೂದರ ಕಲ್ಪನಾ ಮಾಡ್ರಿ. ಆ ಮಾನದಿಂದ ಇದು ದೊಡ್ಡದಲ್ಲಾ. ನನ್ನ ತಾಯಿ ಸತ್ತು ಸ್ವರ್ಗದಾಗ ಇದ್ದಾಳ. ತನ್ನ ಮಗಾ ಅನಾಥರ್ಹಾಂಗ ಹಬ್ಬಾ ಮಾಡಿಕೋಳ್ಳಿಲ್ಲಾಂತ ಅನಿಸಿ, ಅಕೀ ಆತ್ಮಕ್ಕ ತೃಪ್ತಿ ಆಗಲಿ. ಅಷ್ಟರ ದಶಿಂದ, ನನ್ನ ತೃಪ್ತೀ ದಶಿಂದ ಇದನ್ನ ಕೊಟ್ಟೆ. ಅನ್ಯಥಾ ನೀವು ಭಾವಿಸ ದಿದ್ರ ಆತು. ಅಷ್ಟs ನಾ ಬೇಡಿಕೊಂಬೂದು."

ನನ್ನ ಮಾತಿನಿಂದ ಮಾವನವರ, ಬೀಗನ ಕಂಣು ತೇವವಾದವು. ಸುಧಾ, ಅವಳ ವೈನೀಗೆ ಅಲ್ಲಿ ನಿಲ್ಲುವದಾಗಲಿಲ್ಲ. ದುಃಖ ಉಮ್ಮಳಿಸಿರ ಬೇಕು. ಅವರು ಒಳಗೆ ಹೋಗಿಬಿಟ್ಟರು.

ಅಂದಿನ ಸಂಜೆ ಸುಖವಾಗಿ ಕಳೆಯಿತು. ನನ್ನ ಕೋಣೆಯಲ್ಲಿ ಸುಧಾನ ಅಣ್ಣ, ಅವಳ ವೈನೀ—ಎಲ್ಲರೆದುರಿನಲ್ಲಿ, ಸುಧಾ, "ನನ್ನ ಕಾವ್ಯ"ಗಾಯನ ಮಾಡಿದಳು. ಮಾವನವರು ಹಿರಿಯರು. ಹುಡುಗ ಪಾಳ್ಯದಲ್ಲಿ ಸೇರಿರಲಿಲ್ಲ. ನಮ್ಮ ಹುಡುಗಾಟ, ಮೋಜಿಗೆ ವ್ಯತ್ಯಯ ಬರದಿರಲಿ ಎಂದು ಅವರು ಹಾಗೆ ಮಾಡಿರಬೇಕು. ಬಹಳ ದಿನಗಳನಂತರ ಬಂದಿದ್ದ ಮೊಮ್ಮಕ್ಕಳನ್ನು ಮುಂದೆ ಮಾಡಿಕೊಂಡು ಗಾಳಿ ಸಂಚಾರಕ್ಕೆ ಹೋಗಿದ್ದರೆಂದು ಕಾಣುತ್ತದೆ

ರಾತ್ರಿಯ ಊಟಕ್ಕೆ ಹೊಟ್ಟೆಯಲ್ಲಿ ಇಂಬಿರಲಿಲ್ಲ. ಆರತಿ-ಮಗಾರಿ ಆದ ದಿನ ಉಪವಾಸ ಮಲಗಬಾರದು, ಎಂದು ಸುಧಾ ಪೋಕ್ತ ರೀತಿಯಲ್ಲಿ ಹೇಳಿ, "ಅನ್ನ-ಸಾರಿನ" ಅನ್ನಾರಾಧನೆ ಮಾಡಿಸಿದಳು. ಹತ್ತೂವರೆ ಗಂಟೆಯ ಹೊತ್ತಿಗೆ ಸುಧಾನ ಮನೆಯಿಂದ ನನ್ನ "ಮುಶಾಫಿರ ಖಾನಾ"ಕ್ಕೆ ಬಂದು

ಮಲಗುವ ಯೋಚನೆಯಿಂದ ಕಾಟಿನ ಮೇಲೆ ದೇಹ ಒಗೆದೆ.

ಸುಧಾ ಆರತಿ ಮಾಡಿದ್ದು, ಆರತಿ ಮಾಡುವಾಗ, ಆರತಿ ತಟ್ಟೆಯಲ್ಲಿ ಹೊಳೆಯುವ ಎರಡು ಬೆಳ್ಳಿಯ ನೀರಾಂಜನದಲ್ಲಿ ದೇದೀಪ್ಯಮಾನವಾಗಿ ಬೆಳಗುವ ದೀಪದ ಕುಡಿಯೊಡನೆ ಸ್ಪರ್ಧಿಸುವ ತೇಜದಿಂದ, ಕಾಂತಿಯಿಂದ ತುಂಬಿದ ಕಣ್ಣಿನಿಂದ ನೋಡಿದ್ದು, ಸೂಸಿ ಬರುವ ಮಂದಹಾಸವನ್ನು ತುಟಿ ಕಚ್ಚಿ ಉಲುಕೋಚಿತನ ಮಾಡಗೊಡದೆ ಅದುಮಿ ಹಿಡಿದದ್ದು ಇನ್ನೂ ತಳ ತಳಿಸುತ್ತಿತ್ತು. ಆ ನೋಟ, ಆ ಹಾಸದಲ್ಲಿಯ ಪಾವಿತ್ರ್ಯ, ಅನುರಾಗ, ಸಚೇತನವಾಗಿ ಕಂಣೆದುರು ಕಟ್ಟಿತು. 'ಸುಧಾ, ಮನವನ್ನು ಬೆಳಗುತ್ತಿರುವೆ, ಮನೆಯನ್ನೂ ಬೆಳಗು' ಎಂದು ಜೀವ ಆಲ್ಪರಿದು ಹೇಳುತ್ತಿತ್ತು. ನನ್ನ ತಾಯಿ, ಸೊಸೆ, ಮೊಮ್ಮಕ್ಕಳನ್ನು ಕಾಣದೆ, ಆ ಭಾಗ್ಯ ಕೈಗೆ ಬರುವಷ್ಟರಲ್ಲಿಯೇ ಕಂಣು ಮುಚ್ಚಿದಳು. ಇಂದು ಅವಳು ಜೀವಿಸಿದ್ದರೆ, ಈ ನೋಟವನ್ನು ಕಂಣಾರೆ ಕಂಡಿದ್ದರೆ, ಎಂಥ ಸಂತೃಪ್ತಿಯನ್ನು ಪಡೆಯುಬಹುದಾಗಿತ್ತು. ಸುಧಾ, ಇನ್ನೂ ನನ್ನಾಕೆಯಾಗಿರಲಿಲ್ಲ; ನಿಜ. ಆದರೆ ಆಗುವದಕ್ಕೆ ಅಷ್ಟಿ ಆತಂಕ ಏನೂ ಇರಲಿಲ್ಲ. ಮಗನ ಸುಖಕ್ಕಾಗಿ, ನನ್ನ ತಾಯಿ, ತಾನಾಗಿಯೇ ಮುಂದಾಗಿ ಇಂಥ ಅನುರೂಪ ಸೊಸೆಯನ್ನು ಜೇಡಿ ಪಡೆಯಲು ಹಿಂದೆ ಮುಂದೆ ನೋಡುತ್ತಿರಲಿಲ್ಲ.

ವಿಚಾರ ಧಾರೆ ಇದೇ ರೀತಿಯಾಗಿ ಹರಿದು ಸಾಗಿತ್ತು. ದೀಪಾವಳಿ ಮುಗಿದ ಮೇಲೆ, ತುಳಸಿಯ ಲಗ್ನ. ಮುಂದೆ ಲಗ್ನ ಮಾಸದ ಮೋಸಮ್. ಮಾವನವರು ಯಾವ ಹಾಲಚಾಲಿಯೂ ಇಲ್ಲದೆ ಸ್ವಸ್ಥರಾಗಿದ್ದಾರಲ್ಲ. ಎಲ್ಲಿಯಾದರೂ ನೋಡಿ ಇಟ್ಟಿದ್ದಾರೋ ಏನೋ? ಕಲಿತ, ಚೆಲುವೆಯಾದ ಮಗಳು, ಕೈತುಂಬ ಕಾಸುಕೊಡುವ ಯೋಗ್ಯತೆ—ಸಂಪತ್ತು ಇರುವಾಗ, ವರಕ್ಕೇನು ಬರಗಾಲ? ಹಾಗಿದ್ದರೆ ಅದನ್ನು ನನ್ನ ಮುಂದೆ ಆಡಿ ತೋರಿಸುತ್ತಿದ್ದರಲ್ಲ. ನಾನು, ಸುಧಾ ಇಷ್ಟು ಸಲಿಗೆಯಿಂದ ಇರುವದನ್ನು ಗಮನಿಸಿಯೂ ಅರಿಯದವರಂತೆ ವರ್ತಿಸುತ್ತಾರೆ. ಹಾಗೆ ಬೇರೆ ಎಲ್ಲಿಯಾದರೂ ಗಟ್ಟಿಯೇ ಆಗಿದ್ದರೆ, ಈ ಸಲಿಗೆಗೆ ಅವರು, ಸುಧಾ ಅನುವುಕೊಡುತ್ತಿದ್ದರೇನು? ಹಾಗೇನೂ ಇರಲಿಕ್ಕಿಲ್ಲ. ಹಾಗಿರದಿದ್ದರೆ ಮತ್ತೆ ಹೇಗಿರಬೇಕು?

ಮೊನ್ನೆ ಶ್ರೀ ಸೊರಟೂರರು ನನ್ನ ಕುಂಡಲಿ ಬೇಡಿ ತೆಗೆದುಕೊಂಡು ಹೋದರು. ಅವರು ಹಿರಿಯರು; ಕಚೇರಿಯಲ್ಲಿ ನನ್ನ ಮೇಲಿನ ವರಿಷ್ಠರು. ಇಲ್ಲವೆಂದು ಹೇಗೆ ಹೇಳಲಿ? ಕೊಟ್ಟಿದ್ದು ನಿಜ. ಅದನ್ನು ಯಾಕೆ ಒಯ್ದಿರ ಬೇಕು? ಒಯ್ದು ನಾಕಾರು ದಿನವಾದ ನಂತರದಿಂದ, ಅವರ ಸಲಿಗೆ ಹೆಚ್ಚಿ ಯಾಗಿದೆ. ನನ್ನ ಬಡತಿಯ ವಿಷಯವನ್ನೂ ಆಡಿತೋರಿಸಿದ್ದಾರೆ. ಏನೋ ಗುಂಭವಿದೆ. ಎಳೆ ಜೋಡಿಸುವದು ಎಲ್ಲಿ, ಯಾರಿಗೆ ಗೊತ್ತು? ಅವರಿಗಂತೂ ಬೆಳೆದು ನಿಂತ ವರಾರ್ಥಿ ಕನ್ಯೆಯರಿಲ್ಲ-ಅಂದಮೇಲೆ ಮಾವನವರ ಬಗ್ಗೆಯೇ ಪ್ರಯತ್ನಿಸುತ್ತಿರಬೇಕೇನು? ಅದಕ್ಕೆ ಇಷ್ಟೇಕೆ ಪ್ರಯಾಸ? ನಿಂತ ಕಾಲ ಮೇಲೆ ನಾನು ಸಿದ್ಧನಿರುವೆನಲ್ಲ, ಸುರಿಗೆಯಲ್ಲಿ ಕೂಡಲಿಕ್ಕೆ? ನೀನು ಕೂತೀ! ನಿನ್ನ ಸಿದ್ಧತೆಗೆ, ಕುಂಡಲಿಯಲ್ಲಿ ಕುಳಿತ ಗ್ರಹರಾಜರ ಒಪ್ಪಿಗೆ ಬೇಕಲ್ಲ! ನೀನು ಕುದುರೆ ಏರಿದರೇನು? ಗಜಾರೂಢನಾದರೇನು? ಅದರಲ್ಲಿ ಅರ್ಥ ವಿಲ್ಲ! ಹೃದಯಮಿಲನ ಮುಖ್ಯ. ಕುಂಡಲಿಯಲ್ಲಿಯ ದ್ವಾದಶ ಗ್ರಹಗಳ 'ಅಸ್ತು' ಯಾರಿಗೆ ಬೇಕಾಗಿದೆ? ಸುಧಾ, ನಾನು, ಆ ದಾರಿಯಲ್ಲಿ ಎಷ್ಟು ದೂರ ನಡೆದು ಬಂದಿರುವೆವೆನ್ನುವದನ್ನು ಪ್ರತ್ಯಕ್ಷ ಸಾಕ್ಷೀಭೂತರಾಗಿ, ನಿತ್ಯ ಅವರೇ ನೋಡುತ್ತಿರುವರಲ್ಲ; ಔಪಚಾರಿಕ ಸಮ್ಮತಿಯ ಆಗತ್ಯವೇನು ಬಂತು ಮತ್ತೆ?

ಸುಧಾನ ಅಂಣ, ವೈನೀ ಅವರೂ. ಬಂದಿದ್ದಾರೆ. ಅವರ ಮಾತಿನ ರೀತಿ-ಲಕ್ಷಣ ನೋಡಿದರೆ, ನಮಗೆ ಅನುಕೂಲರಿರುವಂತೆಯೇ ಕಾಣುತ್ತದೆ. ಇಲ್ಲದಿದ್ದರೆ ನಾನು ಸುಧಾನಿಗೆ ಜೇನು ಕೊಟ್ಟಾಗ ಅವರ ಕಂಣು ತೀವ ವಾಗುತ್ತಿರಲಿಲ್ಲ. ಏನೋ ಬೇರೆಯಾಗಿ ಭಾವಿಸಬಹುದಾಗಿತ್ತು. ಹಾಗೆ ನೋಡಿದರೆ ಸರ್ವರೀತಿಯಿಂದಲೂ ನನಗೆ ಗ್ರಹ ಅನುಕೂಲವಾಗಿವೆ. ಗ್ರಹಾಧಿಪತಿ ನಾನೇ ಸರ್ವಾನುಕೂಲನಿದ್ದಾಗ ಅವೇನು ಮಾಡಿಯಾವು? ದೀಪಾವಳಿ ಮುಗಿಯಲಿ, ತುಳಸಿಯ ಲಗ್ನವೂ ಸಾಂಗವಾಗಿ ನೆರವೇರಲಿ. ಮುಂದೆ ದೈವ ಒಲಿದರೆ, ದೇವರಿದ್ದಾನೆ. ಸುಧಾ ನನ್ನವಳು ಆದಾಳು. ಮುಂದಿನ ದೀಪಾವಳಿ ಇದೇ ಮನೆಯಲ್ಲಿ—ಆಹಾಃ ಕಲ್ಪನಾ ಸುಖವೇ! ಕವಿ ಹೇಳಿದಂತೆ ನೀನು ಭೃಂಗದ ಬೆನ್ನೇರಿಯೇ ಬರುವದಿಲ್ಲ. ಕಲ್ಪನಾ ಭೃಂಗದ ಬೆನ್ನೇರಿ ಬರುವೆ. ಪ್ರತ್ಯಕ್ಷ ಸುಖ, ಆ ಸುಖ-ವಿಲಾಸಕ್ಕಿಂತ ಈ ಕಲ್ಪನೆಯ

ಕಚಕುಳಿಯ ಆನಂದವೇ ಆನಂದ. ಸೊಗಸೇ ಅಚಿಂತ್ಯ. ಈಗ ಸುಧಾ ಇದ್ದಿ ದ್ದರೆ ಅವಳಿಗೆ ನನ್ನ ಈ ಧೇನಿಕೆ, ಎಣಿಕೆ, ಕಲ್ಪನಾವಿಲಾಸದ ವೈಖರಿ ಯನ್ನು ಮೆಲ್ಲಗೆ ಕಿವಿಯಲ್ಲಿ ಹೇಳಿದ್ದರೆ, ಅವಳು ನಾಚಿ ಲಜ್ಜಿತಳಾಗಿ, ಕೆಂಪೇ ರಿದ ಮುಖದಿಂದ, ತಿನ್ನುವಂತೆ ನನ್ನನ್ನು ನೋಡಿ, "ಎಲ್ಲಾ ಬಿಟ್ಟವರಿಗೆ ಏನ ಹೇಳೂದು" ಎಂದು ಹಂಗಿಸಿದರೂ, ಬಳಿಗೆ ಸುಳಿದು ಬಂದು ರಟ್ಟೆ ಯನ್ನು ಚಿವುಟಿ, ಓರೆ ಗಂಣಿನಿಂದ ನೋಡಿ, ಸಮ್ಮತಿಯನ್ನು ಸೂಚಿಸದಿರು ತ್ತಿದ್ದಳೇ? ಹಾಗೆ ಅವಳೆಷ್ಟು ಸಲ ಮಾಡಿಲ್ಲ? ನನ್ನಾಕೆಯಾಗುವಂತಿರ ದಿದ್ದರೆ ಹೀಗೆ ಮಾಡುತ್ತಿದ್ದಳೇ?

ನನ್ನ ವಿಚಾರಚಕ್ರ ಗಿರಗಿರನೆ ತಿರುಗುತ್ತ ಮಿಂಚಿನ ವೇಗದಿಂದ ಸಂಚರಿಸುತ್ತ ನಡೆದಿತ್ತು. ಯಾವಾಗ ಜಂಪು ಹತ್ತಿತೋ ಅರಿಯೇ. ಜಂಪು ಬೇಗ ಗಾಢವಿದ್ದಗೆ ತಿರುಗಿರಬೇಕು.

ಅಂದು ಕನಸಿನಲ್ಲಿ ಮೂಡಿ ಬಂದ ಮುತ್ತೈದೆ ಮತ್ತೆ ಕಾಣಿಸಿ ಕೊಂಡಳು.

ಈಗ ನನ್ನ ಧೈರ್ಯ ಅಷ್ಟು ಉಡುಗಲಿಲ್ಲ. ನೀವು ಯಾರು? ಏನು ಬೇಕಾಗಿದೆ? ಯಾಕೆ ಹೀಗೆ ಕಾಣಿಸಿಕೊಳ್ಳುತ್ತೀರಿ? ಎಂದು ಕೇಳಬಯ ಸಿದೆ. ನನ್ನ ತಾಯಿ ತೀರಿ ೭-೮ ವರುಷಗಳಾಗಿದ್ದರೂ ಹೀಗೆ ಒಂದು ಸಲ ಕೂಡ ಸ್ವಪ್ನದಲ್ಲಿ ಮೂಡಿರಲಿಲ್ಲ. ಇವರು ನನ್ನ ತಾಯಿಯಂತೂ ಖಚಿತ ಅಲ್ಲ; ಸಾಧಾರಣವಾಗಿ, ವಯಸ್ಸಿನ ಅಂತರ ಬಿಟ್ಟರೆ ನಿಶ್ಚಯವಾಗಿ ಸುಧಾ ನನ್ನೇ ಹೋಲುತ್ತಾರೆ. ಅವಳ ಹುಡುಗತನವಿಲ್ಲ; ತೀರ ಪ್ರೌಢರಾಗಿ, ಮಾನವಂತೆಯಾದ ಸುವಾಸಿನಿಯರಂತೆ ಕಾಣುತ್ತಾರೆ. ಆದರೆ ನನ್ನ ಕಡೆಗೆ ಇವರದೇನು ಕೆಲಸ? ಏನು ಬೇಡಿ ಪಡೆಯುವ ಹಂಬಲ? ಒಳಗೆ ಸೇದು ತ್ತಿದ್ದ ನಾಲಿಗೆಯನ್ನು ತುಟಿಯ ಮೇಲೆ ಸವರಿಕೊಂಡು ಏನೋ, ಎಂತೋ ಅರಿಯೆ, ಅವರಿಗೆ ಕೇಳಿದಂತೆ ಮಾಡಿರಬೇಕು; ಅವರು ಹೇಳಿದರು—

"ನಾ, ಸುಧಾನ ತಾಯೀ.—ಲಕ್ಷ್ಮೀಬಾಯಿ. ಮಗಳ ತಲೀಮ್ಯಾಲ ಇಷ್ಟ ಅಕ್ಷತಾ ಹಾಕಿ ಕಂಣ ಮುಚ್ಚಬೇಕಂತ ಮಾಡಿದ್ದೆ. ದೇವರ ಮನ ಸ್ಸಿಗೆ ಬರಲಿಲ್ಲಾ. ನನ್ನ ಕೂಸು, ಸುಧಾಗ, ಅತ್ತಿ ಮಾವ ಇಲ್ಲದ ಮನೀ, ಮಂಗಳಿದ್ದ ವರಾ ಆದರೇನಃ ಕೂಡೂದು. ಆಕೀಗೀಗ ಇಪ್ಪತ್ತಮೂರು ತುಂಬಿ

ಇಪ್ಪತ್ತನಾಕರಾಗ. ಯಾತರಾಗ ಏನ ತಗದ ಹಾಕಥಾಂಗ, ಕೈತೊಳಕೊಂಡು ಮುಟ್ಟಬೇಕು, ಹಾಂಗ ನನ್ನ ಸುಧಾ ಇದ್ದಾಳ. ಅದಕ್ಕ ನಿಮಗ ಸೆರ ಗೊಡ್ಡಿ ಬೇಡಿಕೋಳ್ಳಿಕ್ಕೆ ಬಂದೀನಿ. ಸುಧಾನ ಕೈ ಹಿಡೀರಿ. ನಿಮಗ ಅಖಂಡ ಕಲ್ಯಾಣ ಆಗತದ. ನನ್ನ ಕೂಸಿಂದು ಹೂವಿನಂಥಾ ಜೀವನ. ನೀವದು ಅಂಗೈಯಾಗ ಹಿಡದು ಜ್ವಾಕಿ ಮಾಡಬೇಕು! ಅಕೀಗೆ ಒಂದಿಷ್ಟ ಕಸಿವಿಸಿ ಆದರ ನಾ ಕಾಣಿಸಿಗೋತೀನಿ. ಅಂಗಾಲಿಗೆ ಹೇಸಿಗಿಲ್ಲಾ, ಕರಳಿಗೆ ನಾಚಿಗಿಲ್ಲಾ ಅಂತಾರ. ನಂದು ತಾಯೀ–ಹೆಂಣಗರಳಾ. ನಾ ಸತ್ತರೂ, ನನ್ನ ಜೀವ ಇಲ್ಲೇ ಘುಟಮಳಸ್ತದ. ಕಾಕಪಿಂಡ ಆಗಲಿಲ್ಲ ನನಗ. ನನ್ನ ವಾಸನಾದ ಅರ್ಥನ್ನು ಯಾರಿಗೂ ಆಗಲಿಲ್ಲಾ. ಜಲಪಿಂಡಾ ಮಾಡಿದರು. ಇಂದ, ದೊಡ್ಡ ಹಬ್ಬಾ. ಇಂಥಾ ಅಭದ್ರ ಮಾತ ಮಾತಾಡಬಾರದು. ನನ್ನ ಕೂಸಿಗೆ ನೀವಿಂದ ಜೀನ ಕೊಟ್ಟರಿ. ಅಕೀ ನನ್ನ ನೆನಿಸಿಗೊಂಡು ಅತ್ಲು. ಕಂಣೀರ ಹಾಕಿವಳು. ಕರಳ ಕಸವಿಸಿ ಆತು. ಅದಕ್ಕ ಕಾಣಿಸಿಗೊಂಡೆ. ನೀವು ಹೂಂ ಅನ್ರಿ. ನಾ ಮುತ್ತೈದಿ ಸಾವ ಸತ್ತೀನಿ. ನನ್ನ ಆಶೀರ್ವಾದಾ ಹುಸಿ ಹೋಗ್ವಾಂಗಿಲ್ಲಾ. ನಿಮ್ಮ ಕಲ್ಯಾಣ ಆದೀತು. ನನ್ನ ಆತ್ಮಾ ವರಾವರಾ ಅಂತ ಅಲೀತದ. ಅದಕ್ಕಿನ್ನ ಶಾಂತೀ ಆಗಲಿ, ಸಮಾಧಾನ ಆಗಲಿ, ನೀವು ಒಪಗೊಂಡರ ನಾ ನಿಶ್ಚಿಂತಿಯಿಂದ ಹೋಗತೇನಿ ನಾ ನಿಮ್ಮ ತಾಯೀ ಸಮಾನಾ. ಯಾಕ ಮಾತಾಡಲೊಲ್ಲರಿ? ಘಾಬರ್‍ಯಾದ್ರ್ಯೇನು ? ಅಂಜಬ್ಯಾಡ್ರಿ. ನಾ ಏನ ದೆವ್ವಲ್ಲಾ, ಭೂತ ಅಲ್ಲಾ, ಪಿಶಾಚಿ ಅಲ್ಲಾ, ಏನೂ ಅಲ್ಲಾ. ಸುಧಾನ ತಾಯೀ. ಮುತ್ತೈದೀ ಸಾವ ಸತ್ತ ಹೆಂಣಮಗಳು. ನನ್ನ ಅಂತಃಕರಣಾ ಇನೂ ವಿಲಿ ವಿಲಿ ಅಂತ ಮಿಡೀತದಂತ ಹೀಂಗ ಬರತೀನಿ. ಗಂಡಸ ಮಕ್ಕಳ ಕಾಳಜೀ ನನಗ ಇಲ್ಲಾ. ಅವರು ಐದ ದೀಪಾಹಚ್ಚಿ ಬಂದಾರ. ಹೆಂಣ ಜೀವಾ ಎಂದಿಗೂ ದಿಕ್ಕೇಡಿ. ಗಂಡಸು ಅಕೀಗೆ ಆಧಾರ. ನಾ ಜೀವಂತ ಇರೂ ತನಕಾ ಸುಖಾಪಟ್ಟೆ. ಯಾತರಾಗ ಏನೂ ಕಡಿಮೆ ಆಗ್ಲಿಲ್ಲಾ. ಅವರು ದೇವ ರಂಥಾವರು. ಸುಧಾನ ದಶೀಂದ ನಾ ಇಷ್ಟ ಹಚಿಗೋಂಡ ಸತ್ತೆ ಅನೂದು ಅವರಿಗೆ ತಿಳೀಲಿಲ್ಲಾ. ಅದು ತಾಯೀ ಕರಳು. ನನ್ನ ಜಡ್ಡಿನ್ಯಾಗ ನಾ ಆರ ತಿಂಗಳ ನೆರಳಿದ್ರೂ ನನ್ನ ಸುಧಾ, ತಾಯೀ ಹಾಂಗ ನನ್ನ ಸೇವಾ ಮಾಡಿದ್ಲು. ಆಸರಕಿ- ಬ್ಯಾಸರಕಿ ಎಂದೂ ತೋರಸಲಿಲ್ಲಾ. ನಾ ಅಕೀಗೆ ಹಡದ ತಾಯಿ

ಅವ್ರು ನನಗೂ ತಾಯೀ ಹಾಂಗ ಆಕಿ ಆವ್ಳು, ನಾ ಸಾಯೂ ಮುಂದ. ಆವಕೂ ನನ್ನ ಕರಳ ಮಿಡೀತದ. ಅಕೀ ಕಲ್ಯಾಣವ್ದ ಶಿಂದ ವಿಲಿವಿಲಿ ಒದ್ದಾಡ ತದ. ಆಕೀ ಕಲ್ಯಾಣ ನಿಮ್ಮ ಕೈಯಾಗದ. ನನ್ನ ಕೂಸಿನ್ನ ನಿಮ್ಮ ಕೈಯಾಗ ಕೊಟ್ಟೇನಿ.''

ಮುಂದೆ ಕೇಳುವ ಶಕ್ತಿ ನನ್ನಲ್ಲಿ ಉಳಿದಿರಲಿಲ್ಲ. ಆ ತಾಯಿಯ ಅತೃಪ್ತ ಆತ್ಮಕ್ಕೆ ತೃಪ್ತಿಯಾಗಲಿ, ಸಮಾಧಾನ ಸಿಗಲಿ, ಅನಂತ ಶಾಂತಿ ದೊರಕಲಿ, ಎಂದು '' ನಾ ಒಪ್ಪಿದೆ. ನೀವು ನಿಶ್ಚಿಂತರಾಗರಿ. ಸುಧಾ ನನ್ನಾಕಿ ಆವ್ಳು. ಅಕೀ ಸುಖಾ ನನ್ನ ಸುಖಾ, ಅಕೀ ದುಃಖಾ ನನ್ನ ದುಃಖಾ. ನನ್ನ ತಾಯೀ ಆತ್ಮ ಸಾಕ್ಷೀ ಆಗಿ ನಿಮುಗ ಮಾತಕೊಡತೇನಿ.'' ಏನೇನೋ ಹೇಳಿದೆ. ಮುಂದೆ ಆಡಿದೆನೋ ಇಲ್ಲವೋ ಅರಿಯೆ. ಇಂದಿಗೂ ಅವರ ನೆನ ಪಾಗಲೊಲ್ಲದು. ನಾನು ನಾನಾಗಿರಲಿಲ್ಲ. ಕಲ್ಲುಕೊರಡಾಗಿದ್ದೆ ಏಳುವ ತ್ರಾಣವೂ ಇರಲಿಲ್ಲ. ಬಿಟ್ಟ ಕಂಣು ಬಿಟ್ಟು ಹಾಸಿಗೆಯಲ್ಲಿಯೇ ಬಿದ್ದಿದ್ದೆ. ತೆರೆದಿಟ್ಟ ಕಿಡಿಕಿಯಿಂದ ಸುಧಾನ ಮನೆಯ ತಲೆಬಾಗಿಲು ಕಾಣುತ್ತಿತ್ತು. ದಾನಾ ಸಂಜೆಯ ಮುಂದೆ ಹಚ್ಚಿದ ಆಕಾಶಬುಟ್ಟಿಯ ಮಂದ ಪ್ರಕಾಶ ಇನ್ನೂ ಬಿದ್ದಿತ್ತು. ಆ ಮಸಕು ಬೆಳಕಿನಲ್ಲಿ ಯಾರೋ, ಏನೋ ಚಲಿಸಿ, ಬಾಗಿಲ ಕಡೆಗೆ ಹೋಗುವಂತೆ ಭಾಸವಾಯಿತು. ತೀರ ಬಾಗಿಲ ಬಳಿ ಬಂದಾಗ, ಆ ಚಲಿಸುವ ಛಾಯೆ, ಭಾಸವಾಗಿರದೆ, ಆಗಲೇ ಕನಸಿನಲ್ಲಿ ಕಂಡ ಸುಧಾನ ತಾಯಿಯ ಆಕೃತಿಯಂತೆ ಕಂಡಿತು. ಗಡಗಡ ನಡುಗಿ ನಾನು ಮತ್ತೆ ಕಂಣು ಮುಚ್ಚಿದೆ. ಮತ್ತೆ ಕಂಣುಬಿಟ್ಟಾಗ ಎಲ್ಲ ನೀರವ— ನಿಃಶಬ್ದ—ಶಾಂತಿ.

ಅವರು ಕಾಣಿಸಿಕೊಂಡದ್ದು ಇದು ಎರಡನೇ ಸಲ

ಈಗಲೂ ನಾನು ನೋಡಿದ ನೋಟಕ್ಕೆ, ಆಡಿದ ಮಾತಿಗೆ ವ್ಯಾಖ್ಯೆ ಕೊಡಲಿಲ್ಲ. ಎಂದಿಗಿಂತ ಹೆಚ್ಚಾಗಿ ಸುಧಾ ನನಗೆ ಹತ್ತಿರದವಳಾಗಿ, ನನ್ನವ ಳಾಗಿ ಕಾಣತೊಡಗಿದಳು. ಕನಸಿನಲ್ಲೇ ಆಗಲಿ, ಮುತ್ತೈದೆಯ - ಅವಳ ತಾಯಿಯ ಆತ್ಮ ಸಾಕ್ಷಿಯಾಗಿ ನಾನು ಸುಧಾನನ್ನು ವರಿಸುವ ಮಾತು ಕೊಟ್ಟಿದ್ದೆ. ಈಗಾಗಲೇ ಸುಧಾ ನನ್ನ ಮಾನಸ ಮಡದಿಯಾಗಿದ್ದಳು.

ಶ್ರೀ ಸೊರಟೂರ ಅವರು ಒಂದು ರವಿವಾರ ಸಂಜೆಗೆ ನನಗೆ ಚಹದ ಆಮಂತ್ರಣ ಕೊಟ್ಟಿದ್ದರು. ಅಂಥ ವಿಶೇಷ ಕಾರಣವೇನೂ ಇದ್ದಂತೆ ತೋರ ಲಿಲ್ಲ. ಚಹ ಮುಗಿದ ಮೇಲೆ, ಅವರು ನೇರವಾಗಿ ಮದುವೆಯ ಪ್ರಸ್ತಾಪ ವೆತ್ತಿದರು. ಕುಂಡಲಿ ಕೂಡಿಸಿ ನೋಡಿ "ಅಪ್ರತಿಮ"ವಾಗಿರುವವನ್ನು ತಿಳಿ ಸಿದರು. ವರದಕ್ಷಿಣೆಯ ಅಂಕಿ-ಸಂಖ್ಯೆಯನ್ನು ಒಡೆದರು. ಎರಡೂ ಕಡೆಯ ಲಗ್ನದ ವೆಚ್ಚ, ಕನ್ಯಾಪಕ್ಷದ್ದೆಂದು ತಿಳಿಸಿದರು. ಒಮ್ಮೆಲೇ ಸಮ್ಮತಿ ತೋರಿ ಸುವದು ಸರಿಯಲ್ಲವೆಂದು, ಏನಾದರೂ ಕೇಳಬೇಕೆಂದು "ಅದೆಲ್ಲಾ ಒಪ್ಪಿ ಕೊಂಡೆ. ಆದರ ಕನ್ಯಾ ಯಾವದು? ಯಾರದು? ನೋಡದ್ದ ಹ್ಯಾಂಗ ಕಬೂಲ ಮಾಡಲಿ" ಎಂದು ಕೇಳಿದೆ. ಅವರು ತಾವು ಅದಕ್ಕೆ ಉತ್ತರ ಹೇಳದೆ, ತಮ್ಮ ಮನೆಯವರನ್ನು ಕೂಗಿ ಕರೆದು ಮತ್ತೆ ಪುರೋಹಿತಿ ವಾಚಿಸಿ "ನೀನs ಹೇಳೂ; ಕನ್ಯಾ ಎಲ್ಲೀದಂತ? ಅಂಗಳದಾಗs ಪಾರಿಜಾತ ಅದ. ಮಂಗಳಕ ಹಾರೂದೇನ ಬ್ಯಾಡಾ ಅಂತ." ಯಾಜಮಾನರ ಮಾತಿಗೆ ಅವರು ನಕ್ಕು ಹೇಳಿದರು: "ಸುಧಾ ಒಪ್ಪಿದ್ದು ಅನ್ರಿ. ಮುಂಚೇ ಜಮಾಸೇದ, ಇದೇನು ಬರೇ ನಾಟಕಾ." ಅಂತೂ ಜಮಾಸಿದ ಸುದ್ದಿ ಊರ ತುಂಬಾಗಿತ್ತೆಂದು ಆಗಲೇ ನನಗೆ ಅನುಭವಕ್ಕೆ ಬಂದಿತು

ಮುಂದೆ ಒಂದು ತಿಂಗಳಲ್ಲಿ, ಕೋಲ್ಹಾಪೂರದಲ್ಲಿ, ಮಹಾಲಕ್ಷ್ಮಿಯ ಸಮ್ಮುಖ ಸಾಕ್ಷಿಯಾಗಿ ನಾನು ಚತುರ್ಭಜನಾದೆ

ಲಗ್ನ ಮುಗಿಸಿಕೊಂಡು ತಿರುಗಿ ಬಂದೆವು. ಇಂದು ಸುಧಾ ವಿಧಿಪೂರ್ವಕ ವಾಗಿ ಆ ಮನೆಯಿಂದ ಈ ಮನೆಗೆ ಬಂದಳು.

ಲಗ್ನ-ಪ್ರಸ್ತದ ಪ್ರಥಮ ರಾತ್ರಿ, ಪ್ರಥಮ ಪರಿಚಯದ ನವ ವಧೂ-ವರರಿಗೆ "ಏನೋ ವಿಶೇಷ"ವೆನಿಸುತ್ತಿರಬೇಕು. ನನಗೆ-ಸುಧಾಸಿಗೆ ಮಾತ್ರ ಇದು, ಅವರಿಗೆನಿಸುವಂತೆ ನವೀನವಾಗಿ ತೋರಲಿಲ್ಲ. ಲಗ್ನ ನಿಶ್ಚಯವಾದ ಮೇಲೂ, ನಾವಿಬ್ಬರೂ ಕೂಡಿ ಕುಳಿತಿದ್ದೆವು. ಹರಟೆ ಹೊಡೆದಿದ್ದೆವು. ಸಲಿಗೆ ಯಿಂದ ಬಳಿಬಳಿಗೆ ಬಂದಿದ್ದೆವು. ಆದರಿಂದ ಈ ಪ್ರಥಮ ರಾತ್ರಿ 'ಅದೇನೋ ಮಹಾ' ಎನಿಸಲಿಲ್ಲ.

ಆದರೆ ನನಗೆ ಮಾತ್ರ ಡುಗುಡುಗು ಇತ್ತು. ಮರೆಯಬೇಕೆಂದು ಯತ್ನಿ ಸಿದಷ್ಟೂ ಒಂದು ವಿಚಾರ ತಲೆ ಎತ್ತಿ ನಿಲ್ಲತೊಡಗಿತ್ತು. ಇಂದು ಮಲಗಿ

ನಿದ್ದೆ ಹತ್ತಿದಾಗ 'ಅವರು' ಮತ್ತೆ ಕಾಣಿಸಿಕೊಂಡರೆ? ನಾನು ಬಡಬಡಿಸಿದರೆ? ಸುಧಾ, ಇಂದು ಬದಿಯಲ್ಲಿದ್ದಾಳೆ. ಅವಳಿಗೆ "ಅವರು" ಬಂದು ದರ್ಶನ ಕೊಡುವ ವಿಷಯದ ಗೌಪ್ಯ ಸ್ಫೋಟವಾದರೆ? ಅವಳಿಗನಿಸೀತಲ್ಲ-ತನ್ನ ತಾಯಿ ಇವರನ್ನು ಅಂಜಿಸಿ-ಅಳುಕಿಸಿ, ಮದುವೆಗೆ ಒಪ್ಪಿಸಿದಳೆಂದು. ಬಾಳಿನ ಮಂಗಲ ಮಂದಿರ ಇದೀಗ ಏಳತೊಡಗಿದೆ. ಅದರ ಅಡಿಪಾಯ, ಅವರ ದರ್ಶನ ಪ್ರಸಂಗದಿಂದ ಕುಸಿಯಬಾರದು. ಮುಂದೆ ಎಂದಾದರೂ ಅಂಥ ಪ್ರಸಂಗವೇ ಬಂದಲ್ಲಿ ಹೇಳಿದರೆ, ಆಗ ಅದರಲ್ಲಿ ಈ ಕಾವು ಉಳಿದಿರಲಾರದು, ಈಗ ಮಾತ್ರ ಅದಕ್ಕೆ ವಾಚ್ಯತೆ ದೊರೆಯದಿರಲಿ, ಎಂಬ ಯೋಚನೆಯ ಸುಳಿವಿನಲ್ಲಿ ನಾನು ಸುತ್ತುತ್ತಿರುವಾಗ, ಸುಧಾ ಮೃದುವಾಗಿ ರಟ್ಟೆಯನ್ನು ಅಮುಕಿ "ಯಾಕಽ, ಕಾವ್ಯ ಸಮಾಧೀ ಹತ್ತಿಧಾಂಗ ಕಾಣಸ್ತದಽ? ಭೃಂಗಾ ಭೋರಂಗೀ ಬೆನ್ನೇರಿ ಬರವಲ್ಲದೇನು ಪ್ರತಿಭಾ ವಿಲಾಸಾ ?"

"ಇಷ್ಟು ದಿನಾ ಪ್ರತಿಭಾ ದೂರ ದೂರಽ ಇರತಿತ್ತು. ಹಿಡಿಯೂದರೊಳಗಽ ಕೈಯಾಗಿಂದ ಜಾರಿ, ಹಾರಿಹೋಗತಿತ್ತು. ಇನ್ನೇನ ಅದರ ಚಿಂತಿಲ್ಲಾ. ಪ್ರತ್ಯಕ್ಷ ಎದುರಿಗೇನಽ ಸ್ಥಾನಾಪನ್ನ ಆಗೇದ. ಇನ್ನದು ಜನ್ಮಜನ್ಮಾಂತರದ ಸೋಬತಿ." ಅವಳು ರಟ್ಟೆಯನ್ನು ಅಮುಕುವಾಗ ಚಿವುಟಲಿಕ್ಕೆ ಮರೆತಿದ್ದಳು. ಈಗ ನಾನು ಆ ಕೆಲಸ ಮಾಡುತ್ತ ಹೇಳಿದೆ.

"ಊಂ ಹುಂ, ಛೀ, ಛೀ. ಗುರೂನ್ನ ಪಕ್ಕಾ ಚೇಲಾ ಏನ ಅಲ್ಲಾ. ಇನಾ ಹಸೀ ಮುಡಿಕಿ. ಅದು ಸುಧಾ ಬ್ರ್ಯಾಂಡ Speciality. ನಿಮಗ ಜಮಾಸು ಧಂದೇನಽ ಅಲ್ಲಾ."

ನನಗೆ 'ಜಮಾಸುವ ಧಂದೇದ' ಪ್ರಸಾದ, ಇನ್ನು ತನಗೆ ಖಚಿತ ಸಿಗಲಿರುವವನ್ನು ಊಹಿಸಿ, ಕಿಲಕಿಲನೆ ನಕ್ಕು ಆಕೆ, ತಟ್ಟನೆ ಹಾಸಿಗೆಯ ಮೇಲೆ ಮಲಗಿ, ಮುಖದ ತುಂಬ ರಗ್ಗು ಎಳೆದುಕೊಂಡಳು. ಮುಸುಕಿನೊಳಗಿಂದಲೇ ರಾಗವಾರಿಯಲ್ಲಿ "ಪ್ರತಿಭಾ ನವನವೋನ್ಮೇಷ ಶಾಲಿನಿ, ಸುಳ್ಳಲ್ಲ ದೇವರೂ ನನ್ನ ಸತ್ಯ" ಎಂದಳು. ನಗೆ ಇನ್ನೂ ಉಕ್ಕುತ್ತಲೇ ಇತ್ತು. ನಾನು ಪರಾಜಿತನಾಗಿದ್ದೆ. ಸೋತರೂ ಮೀಸೆ ಮಣ್ಣಾಗಿಲ್ಲವೆಂದು ತೋರಿಸುವ ಆಧ್ವರ್ತಿಯಿಂದ "ಇಂದಿಲ್ಲ ನಾಳೆ, ಇವರ ಫಲಾ ಅನುಭೋಗಸೂದುಂದ ಗೊತ್ತಾದೀತು, ನಿನ್ನ ದೇವರ ಸತ್ಯ. ಈಗ ಪಾರಾದಿ."

“ಇಂದು ನಾಳೆಂದೆನುತ ದಿನ ಹಾ....ಕು....ವ....ವ.... ಘೂಸಿಗೋ ಅಂದೆ. ಮುಂದಿನ ಶಬ್ದ ಅಂದಿಲ್ಲಾಂs....ಸುಮ್ನs ದೀಪಾ ಆರಸರಿ ಇನ್ನ. ನಿಮ್ಮ ಬೆಳಕs ರಗಡ ಬಿದ್ದದ.’’

ದೀಪವಾರಿಸಿದೆ. ಇಬ್ಬರೂ ಮಲಗಿದ್ದು ನೆಪ ಮಾತ್ರಕ್ಕೆ. ಸುಧಾ ಒಂದೇ ಸವನೆ, ಮುಸುಕಿನಲ್ಲಿಯೇ ಮಾತನಾಡುತ್ತಿದ್ದಳು. ಮುಸುಕು ತೆಗೆದರೆ ಪ್ರಸಂಗ ಮೈಮೇಲೆ ಬಂದೀತೆಂಬ ದಕ್ಷತೆ ಅದು. ಮಾತನಾಡುತ್ತ, ಆಡುತ್ತ ಅವಳಿಗೆ ನಿದ್ದೆ ಹತ್ತಿದಾಗ ರಾತ್ರಿಯ ಸುಮಾರು ಎರಡು ಗಂಟೆಯಾದರೂ ಆಗಿರಬೇಕು. ಆದರೆ ನನ್ನ ಕಂಣಿಗೆ ಕಂಣು ಹತ್ತಲೊಲ್ಲದಾಗಿತ್ತು. ನನಗೆ ಇದ್ದದ್ದು ಇಂದು ಅವರು ಕಾಣಿಸಬಹುದು ಎನ್ನುವದರ ಧ್ಯಾಸ. ಜಾಗರ ವಾದರೂ ಸರಿ. ಅದನ್ನು ತಪ್ಪಿಸಬೇಕೆನ್ನುವ ಹವ್ಯಾಸ.

ಮುಸುಕಿನಲ್ಲಿ ಸುಧಾ ಬಿಕ್ಕಿ ಬಿಕ್ಕಿ ಅತ್ತಂತಾಯಿತು. ಆ ಬಿಕ್ಕು, ಅಳು ನಿಂತು, ಮಾತು ಮಿಸುಗತೊಡಗಿತು. ಮೊದಲು ತೀರ ಅಸ್ಪಷ್ಟವಾದ ವಾಣಿ ಈಗ ನಿಚ್ಚಳವಾಯಿತು. “ಇಲ್ಲ್ಯಾಕ ಬಂದಿ ಅವ್ವಾ; ನಾಯೀಗ ಆ ಮನ್ಯಾಗಿಲ್ಲಾ. ಇವರ ಮನ್ಯಾಗ ಇದ್ದೀನಿ....ನೀ ಹೀಂಗ ಬರೂದ ನೋಡಿ ಅವರಿಗೇನ ಅನಿಸೀತು. ನಿನ್ನ ಇಚ್ಛಾ ಪೂರ್ಣ ಆತಲಾ. ನಾ ಸುಖೀ ಇದ್ದೀನಿ ಹೌದು ನಾವಿಬ್ಬರs. ಅತ್ತೀ, ಮಾಂವಾ ಯಾರೂ ಇಲ್ಲಾ. ಅತ್ತಿಗಿ, ನಾದ್ನೀನೂ ಇಲ್ಲಾ. ರಾಜಾ-ರಾಣೀ ಅಂತೀಯಾ? ಹಾಂಗs ಅನ್ನು. ಅವರೆಲ್ಲಾ ಇದ್ದರs ಛಂದ ಇತ್ತು. ಈಗ ಅದs ಭಣ ಭಣಾ. ಅಳತೀ ಯಾಕs ನೀ ಇದನ್ನೆಲ್ಲಾ ನೋಡಲಿಲ್ಲಂತs. ಹೌದು, ನಾಕ ದಿನಾ ನಾ ಏನ ಸಂಕಟ ಬಟ್ಟೆ, ಕಸಿವಿಸಿಬಟ್ಟೆ ದೇವರಿಗೇ ಗೊತ್ತು. ಅಂಣಾ ಒಂಟಿಗ್ಯಾ ಆದಾ. ಕೂಸ ಒಪ್ಪಸೂದ ನೋಡಿ ವಿಲಿವಿಲೀ ಒದ್ದ್ಯಾಡಿದಾ; ದಾಮೂನ್ನs, ನಾ ಜ್ವಾಕಿ ಮಾಡತೀನಿ, ಅವನ್ನ ಮರೆಯೂದಿಲ್ಲಾ—ನಿನ್ನ ಆಣಿ, ನನ್ನ ಆಣಿ, ಓಳತಲ್ಯಾ ಅಂದೆ..ಮತ್ಯಾಕ ಮಾರೀ ಸಣ್ಣದ ಮಾಡೀದಿ? ನವ್ವಾಗ ಆಶೀರ್ವಾದ ಮಾಡು. ಖರೇ ಅದ ನೀ ಅನೂದು. ನಿನ್ನ ಮಾತು ಹುಸೀ ಹೋಗ್ಯಾಂಗಿಲ್ಲಾ. ಒಪಗೊಂಡೆ. ಮಕ್ಕಳೂ ಮರೀ, ನನ್ನ ಸಂಸಾರದಾಗ ದಾಮೂನ್ನ ಮರತೀ ಅಂದ್ಯಾs. ಇಲ್ಲs ಅವ್ವಾ, ನನ್ನ ಆಣೀ ಮಾಡಿ ಹೇಳತೀನಿ ಆತಿಲ್ಲೊ? ಅವರs, ಅವರ ನನ್ನ ಮಾತ ಮೀರ್ಯಾಂಗಿಲ್ಲಾ; ನನ್ನ

ಅಂಗೈಯಾಗ ಹಿಡದಾರ, ನೀ ಏನೂ ಕಾಳಜೀ ಮಾಡಬ್ಯಾಡಾ. ಹೀಂಗs ನೀ ಎಷ್ಟಂತ ನವ್ಯಾಕೀ, ನಾ ಸುಖೀ ಇದ್ದೀನಿ ಅಂಡೆನೆಲಾ. ಇದೇನ ಕಾಟ ಅಂದ್ನೀ. ಅಪ್ಪಾ, ಅಪ್ಪಾ ನಾ ನಿನ್ನ ಮಗಳು. ನನ್ನ ಬಾಯ್ಲೆ ಅಂಥಾ ಶಬ್ದರs ಬಂದೀತs ? ಹೋಗಿ ಬರತೀನಂದ್ಯಾ! ಬಾ, ನನ್ನ ಮನಿಗೇ ಬಾ. ಮಗಳ ಮನೀಗೇ ಬಾ. ನಾ ಬ್ಯಾಡ ಅಲ್ಲಿಕ್ಕಿಲ್ಲಾ. ಇಂದ ನಾನೂ ಮುತ್ತೈದಿ. ನಿಂದ್ರು, ಮುತ್ತೈದಿಮಗಳು ಕುಂಕುಮಾ ಹಚ್ಚತಾಳ. ನಾ ಕೈ ಮುಟ್ಟಿ ಹಚ್ಚಬಾರದs. ಮೈ ಅರಿಷಣ ಆರಿಲ್ಲಂತs, ಯಾಕ? ಯಾಕ? ಯಾಕ ಹೇಳವಲ್ಲೀ. ಕುಂಕುಮ ಕರಡಗೀ ಇಡತೇನಿ; ನೀನರs ಹಚ್ಚಿಗೊ. ತುಂಬಿದ ಮನ್ಯಾಗಿಂದ ಹಾಂಗs ಹೋಗಬಾರದು. ಇನ್ನ ಹೊತ್ತಾತಂದ್ಯಾ? ಯಾರ ನೋಡತಾರ? ಇವರಂದ್ಯಾ? ಅವರಿಗೆ ಗಡದ್ದ ನಿದ್ದೆ ಹತ್ತ್ಯೇದ. ನೀ ಸಾವ ಕಾಶ ಹೋಗು. ಹೋದೇನು?''

ಮಾತು ಮತ್ತೆ ಅಸ್ಪಷ್ಟವಾಗತೊಡಗಿತು. ನಾನು ಎಚ್ಚರಿದ್ದರೂ ಗಟ್ಟಿ ಯಾಗಿ ಕಂಣು ಮುಚ್ಚಿದ್ದೆ. ಸುಧಾ ತಟ್ಟನೆ ಎದ್ದು ಕುಳಿತ ಅರಿವಾಯಿತು. ಅವಳು ದೀಪಹಚ್ಚದೆ, ಮೆಲ್ಲನೆ ನಡೆದುಹೋದದ್ದು ಗೊತ್ತಾಯಿತು. ಕಂಣು ಬಿಟ್ಟು ನೋಡಿದೆ. ಅವಳು ಕಿಟಕಿಯ ಬಳಿ ಹೋಗಿ ನಿಂತು, ತಮ್ಮ ಮನೆಯ ಕಡೆಗೆ ನೋಡುತ್ತಿದ್ದಳು. ನನ್ನ ಕಡೆಗೆ ಬೆನ್ನಾಗಿತ್ತು. ಅವಳು ತದೇಕ ಧ್ಯಾನಳಾಗಿ—ಮಿಸುಕದೆ ಶಿಲಾಪ್ರತಿಮೆಯಂತೆ ನಿಂತಿದ್ದಳು. ನಾನು ಮಲಗಿ ದಲ್ಲಿಂದಲೇ ನೋಡುತ್ತಿದ್ದೆ. ಸುಧಾಸ ತಾಯಿಯ ಛಾಯಾಕೃತಿ, ಅವರ ಮನೆಯ ಪಾವಟಿಗೆಯನ್ನು ಏರಿ ಗುಪ್ತವಾದದ್ದು ಭಾಸವಾಯಿತು.

ಸುಧಾ ಬಹಳ ಹೊತ್ತು ಹಾಗೇ ನಿಂತಿದ್ದಳು. ನನಗೆ ತಡೆಯದಾ ಯಿತು. ತಟ್ಟನೆ ಎದ್ದು ಕುಳಿತರೆ, ಅವಳಿಗೆ ತನ್ನ ಅವೇಳೆಯ ಜಾಗರ, ಕಿಟಕಿಯ ಬಳಿ ನಿಂತ ಕಾರಣ ಅನುಮಾನಕ್ಕೆ ಆಸ್ಪದ ಕೊಡುವಂತಾಯಿ ತೆಂದು ಭಾವನೆಯಾಗಬಾರದು; ಅದರಿಂದ ಅವಳ ಜೀವ ಮಿಡಿಯಬಾರದು, ಎಂದು ಯೋಚಿಸಿ ಒಂದು ಮಗ್ಗಲಿನಿಂದ ಇನ್ನೊಂದು ಮಗ್ಗಲಾದಂತೆ ನಟಿ ಸಿದೆ. ಕೈಕಾಲು ಚಲಿಸಿದೆ. ಸುಧಾ ಜಾಗರಲೋಕಕ್ಕೆ ಇಳಿದಳು. ತಿರುಗಿ ಹಾಸಿಗೆಯ ಮೇಲೆ ಬಂದು ಕುಳಿತು, ನನ್ನ ಮೈಮೇಲೆ ರಗ್ಗು ಹೊಚ್ಚಿದಳು. ತಾನು ಮಾತ್ರ ಮಲಗಲಿಲ್ಲ. ನಾನು ಮಲಗಿದ್ದರೂ ಎಚ್ಚರವಿದ್ದೆ. ಸುಧಾನ

ಕನಸಿನಲ್ಲಿ ಅವರು ಬಂದು ಮಾತನಾಡಿದ್ದು, ತಿರುಗಿ ಹೋಗುವಾಗ ನಾನವರನ್ನು ನೋಡಿದ್ದು, ಇದು ಮೂರನೇ ಸಲ.

ಸುಧಾ ಬಹಳ ದೊಡ್ಡ ಜೀವಿ. ಅವಳ ತಿಳುವಳಿಕೆಯೂ ಅಷ್ಟೇ ಹಿರಿದು. ಕನಸಿನಲ್ಲಿ ಅವರು ಬಂದದ್ದು, ತಾನು ಅವರೊಡನೆ ಮಾತನಾಡಿದ್ದು—ಯಾತರಿಂದಲೂ ವಿಚಲಿತವಾಗದಂತಿದ್ದಳು. ರಾತ್ರಿ ಮಲಗುವಾಗ ನಗೆಯಾಡಿ, ನನ್ನನ್ನು ಗೋಳುಹಿಡಿಸಿ, ಗೆದ್ದು, ಮುಸುಕೆಳೆದುಕೊಂಡು ಮಲಗಿದಾಗಿನ, ಗೆಲುವಿನ ಮುಖಮುದ್ರೆಯನ್ನೇ ತಳೆದು, ಹಾಸಿಗೆಯ ಬದಿಗೆ ನಿಂತು, "ಏಳು ನಾರಾಯಣಾ, ಏಳು ಲಕ್ಷ್ಮೀರಮಣ, ಗಂಟೆ ಎಂಟಾಗಿಹುದು ಏಳಯ್ಯ ಬೇಗನೆ" ಎಂದು ಜಾಗರ ಗೀತ ನುಡಿಸಿ, ನಿದ್ರೆಯ ಸೋಗಿನಲ್ಲಿದ್ದ ನನ್ನನ್ನು ಎಬ್ಬಿಸಿದಳು. ಎಂಥ ಸೂಕ್ಷ್ಮದರ್ಶಕ ದುರ್ಬಿಣಿ ಹಿಡಿದು ಹುಡುಕಿದರೂ ಕನಸಿನಲ್ಲಿ ಅವಳು ಪಟ್ಟ ಪಾಡಿನ ಗುರುತು ಸಿಗುವಂತಿರಲಿಲ್ಲ. ಇಂಥ ತೇಜೋವಲಯ ನನಗೆ ಅಖಂಡ ರಕ್ಷೆಯಾಗಿ ದೊರಕಿತಲ್ಲ ಎಂದು ಧನ್ಯತೆ ಎನಿಸತೊಡಗಿತು.

ನನ್ನ ಅವಳ ಪ್ರೀತಿಯ ನಂದಾದೀಪದ ಬೆಳಕಿನಲ್ಲಿ ನಮ್ಮ ಸಂಸಾರ ಸಾಗಿದೆ. ನಾಲ್ಕುವರುಷವಾಗುತ್ತ ಬಂತು, ನಮ್ಮ ಮದುವೆಯಾಗಿ. ತೊಟ್ಟಿಲಿನ್ನೂ ತೂಗಿಲ್ಲವೆಂದು ನಮಗೆ ಕಳವಳವಲ್ಲ. ಹಿಂದಿನ ಹುಡುಗಾಟ, ನಗೆಯಾಟ, ಇನ್ನೂ ತಳತಳಿಸಿ ಪಲ್ಲವಿಸುತ್ತಿದೆ. ಎಲ್ಲಿ, ಯಾವ ಕುಂದುಕೊರತೆ ಕಾಣುತ್ತಿಲ್ಲ. ಅದು ಮುತ್ತೈದೆಯ ಆಶೀರ್ವಾದ ಪ್ರಸಾದವಿರಬೇಕೆಂದು ನನ್ನ ಭಾವನೆ. ನಾಲ್ಕು ವರುಷದ ಈ ಅವಧಿಯಲ್ಲಿ ಅವರೂ ಕಾಣಿಸಿಕೊಂಡಿಲ್ಲ—ಆ ಆತ್ಮಕ್ಕೆ ಅನಂತ ಶಾಂತಿದೊರಕಿರಬೇಕು. ದರ್ಶನ ಮೂರಕ್ಕೇ ಮುಕ್ತಾಯವಾಗಿರಬೇಕು."

"ಸುಧಾ ದೊಡ್ಡ ಜೀವೀ ಅಲ್ಲಾ, ದೊಡ್ಡ ಜೀವನಾ ನಿಮ್ಮದು" ಆಕಾಶವಾಣಿಯಾದಂತೆ ಮಾತು ಕೇಳಿ ಬಂತು. ಆಡಿದವಳು ಸುಧಾ. ನನ್ನ ಮುಖ ಕಪ್ಪಿಟ್ಟಿತು. ಅದನ್ನು ಊಹಿಸಿ ಸುಧಾ ಹೇಳಿದಳು: "ಏನೂ ಕೆಟ್ಟ ಅನಿಸಿಗೋ ಬ್ಯಾಡ್ರಿ. ಇದ್ದದ್ದನ್ನ ಇದ್ಹಾಂಗ ಬರದೀರಿ. ಅವ್ವನ ದರ್ಶನ ನಿಮಗೂ ಆದದ್ದು ಇಂದನ ತಿಳೀತು. ಅದನ್ನ ಮುಚ್ಚಿಟ್ಟು ಏನೂ ಆರೀ

ದವರಗತ್ರೇ ನನ್ನ ಜೋಡಿ ನಾಕ ವರಸ ಸಂಸಾರ ಮಾಡಿದಿರಿ. ದೊಡ್ಡ ಜೀವನಾ, ಹೆಚ್ಚಿನ ತಿಳವಳಿಕೆ ನಿಮಗಿತ್ತಂತ ನಾ ಸುಖಾ ಪಟ್ಟಿ. ಇಲ್ಲದಿದ್ದರಽ....”

“ ಸುಧಾ ನೀ ಶೋಕ್ಕ ಹೋಗಿರಲಿಲ್ಲಽ. ಯಾವಾಗ ಬಂದೀ—ಇದನ್ನೆಲ್ಲಾ ಎಲ್ಲಿ ನಿಂತ್ರ ಕೇಳ್ದಿ ?”—ನಾನೆಂದೆ.

“ ಭಾವಜೀ, ಇಂದಿನ ತನಕಾ ಒಂದಿನಾ ಏನ ಇವರ್ನ ಬಿಟ್ಟು ಶೋಕ್ಕ ಹೋಗಿಲ್ಲಾ. ಹೋದ್ರ ಇಬ್ಬರೂ ಹೋಗೂದು. ಇಲ್ಲಽ ಇಲ್ಲೇ ಇಲ್ಲಾ. ಸಂಜೀ ಮುಂದ ಖರ್ಚಿನ ದಶಿಂದ ಹಾಕ್ಯಾಟ ಆಗಿತ್ತು. ನಾ ಚಾಲವರದೆ, ಶೋಕ್ಕ ನಡೀರಂತ. ಬರೂದಂತೂ ಘೂರಽ ಉಳೀತು. ಒಂದರ ಕಾರಣಾ ತಗದು ಎಲ್ಲೊಲ್ಲ್ಯೀ, ಯಾತರ ಮ್ಯಾಲೋ ಹಾಕಿ ಇಬ್ಬರೂ ಮಾತಾಡ್ಡೀವು. ಹೋಗಲಿ, ಇವರದರೇ ಯಾಕ ಹಂಗ ಅಂತ ನಾ ಸಿನೇಮಾಕ್ಕ ಹೊಂಟ ಹೋದಷ್ಟೇನೋ ಖರೇ. ಹಾದ್ಯಾಗ ಭಾಳ ಕೆಡಕನಿಸಿತು, ನಾ ತಪ್ಪ ಮಾಡಿದೇ ಅಂತ. ತಲೀ ಹೊಡೀಲಿಕ್ಕ ಹತ್ತ್ಯೇದ, ನಾ ಏನ ಶೋಕ್ಕ ವಲ್ಲೆಂತ ವಿಮಲಕ್ಕಗ ಹೇಳಿ ಹಾಂಗಽ ತಿರಗಿ ಬಂದೆ. ತಲೀ ಸುಳ್ಳಾ ಎಲ್ಲಾ ಸುಳ್ಳಾ. ಇವರ್ನ ಚಕಿತ ಮಾಡಬೇಕು ಅನೂ ಈರ್ಷಾದ್ಲೇನಽ ಬಂದಿದ್ದೆ. ಗವಗವಾ ಮೂರೂ ಮಂದೀ ಬಾಯಿ ಕೇಳಿಸಿದ್ದರ ನಟ್ಟಗ ಒಳಗಽ ಬರತಿದ್ದೆ. ಆದರೆ ಇವರು ಓದೂದು ಕೇಳಿಸಿತು. ಮೊದಲನೇ ಸಾರೆ ಅಡ್ಡ್ಯಾಲಿಕ್ಕೆ ಹೋದದ್ದರ ತನಕಾ ಬಂದಿದ್ರು. ಹಳೇ ನೆನಪು ನನಗೂ ಮರಕಳಿಸಿ ಬಂದು ಮಜಾ ಅನಿಸಿತು. ಏನರಽ ಬರದಾರ ಕೇಳೂಣಾಂತ ಖಿಡಿಕೀ ಮರೀಗೆ ನಿಂತೆ. ಕತ್ಲಿ ಇತ್ತಂತ ಹಾಲಿನಕಿನೂ ನನ್ನ ನೋಡಲಿಲ್ಲ. ನನಗ ಹೇಳಬಾರದೂ ಅಂತ ಮುಚ್ಚಿಟ್ಟ ಕಥೀ ಹಿಂಗ ಕದ್ದ ಕೇಳಿದೆ. ಅವ್ವನ ದರ್ಶನದ ಕಥೀ ಸತ್ಯ ಕಥಿ. ಅಕೀ ಮಗಳಽ ಅದಕ ಸರ್ವ ಸಾಕ್ಷೀ. ಒಂದ ಮಾತು ಇಬ್ಬರೂ ಮುಚ್ಚಿಡಬೇಕಂತ ಮಾಡಿದ್ರಿ ನೋಡ್ರಿ, ಎಷ್ಟಽ ಅನ್ಯೋನ್ಯ ಆಗಿದ್ದರೂ, ಆ ಗುಪಿತಾ ಇಬ್ಬರ ಜೀವಕ್ಕ್ಯಾ ಚಿಟಕ ಮುಳ್ಳ ಆಗೇ ಇತ್ತು. ಒಬ್ಬರನೊಬ್ಬರು ನೋಡಿದಾಗ ಒಮ್ಮೆರೇ ಇವರ ಭಾವನಾ, ವಿಚಾರಾ ಬರದಽ ಹೋಗಿರಲಿಕ್ಕಿಲ್ಲಂತ ಯಾತರ ಮ್ಯಾಲಿಂದ ಅನಮಾನ ಸೂದು ? ಖರೇ ಅಂದ್ರ ಇಂದಿನಿಂದಽ ನಾವು ಹೆಚ್ಚ ಅನ್ಯೋನ್ಯ ಆದೆವು.

ತೀರಾ ತ್ರೆಳ್ಳಗಿನ ಪರಿಯಿತ್ತು ನಡವ, ಅದು ಇಂವ ಪರೀತು. ನನ್ನ ತಾಯೀ ಆತ್ಮಾ ಇಂದ ಖರೇನs ಶಾಂತ ಆತು. ಇನ್ನ ಅಕೀ ದರ್ಶನಾ ಕೊಡೂದಿಲ್ಲಾ.

ಸುಧಾ ಚೇತನಾ ಸ್ವರೂಪಿಣಿಯಾಗಿ ಮಾತನಾಡುತ್ತಿದ್ದಳು. ನಾವು ಮೂವರೂ ಶಿಲಾಪ್ರತಿಮೆಯಂತೆ ಕುಳಿತು ಕೇಳುತ್ತಿದ್ದೆವು.

೨೬-೨-೫೬




# ನಾನು-ಅವಳು

ಶನಿವಾರ ಕಚೇರಿಗೆ ಪಾರ್ಸಿಹಬ್ಬವೊಂದರ ನಿಮಿತ್ತ ಬಿಡುವಿತ್ತು. ಭಾನುವಾರದ ಬಿಡುವಿನ ಬಗ್ಗೆ ಬೇರೆ ಹೇಳುವ ಕಾರಣವಿಲ್ಲ. ಶುಕ್ರವಾರ ಒಂದು ದಿನ ಚಕ್ರ ಕೊಟ್ಟರೆ ಮೂರು ದಿನ ಅಖಂಡ ಸುಖವನ್ನು, ವಿರಾಮವನ್ನು ಪಡೆಯಬಹುದು. ಪ್ರಸಿದ್ಧ ನಟ–ನಟಿಯರ ನಾಟಕ ಕಂಪನಿಯೊಂದು ಬಂದು ತಳ ಊರಿತ್ತು. ಅವರಿಗೆ ಒಂದು ದಿನ ಯಥಾಶಕ್ತಿ ಆಶ್ರಯದಾತನಾಗಿ ನಾಟಕ ನೋಡಿಕೊಂಡು ಬರಬೇಕೆಂದು ಗುಣಿಸಿದ ಯೋಚನೆಯನ್ನು ಈಗಲೇ ಸಾಧಿಸಿವಂತಾಗುತ್ತಿತ್ತು. ಮುಂಡಿಗಿಯನ್ನು ಆಕಂಠ ಪೂರ್ತಿಯಾಗಿ ತಿಂದು ತೇಗುತ್ತ, ಗುರುವಾರ ರಾತ್ರಿಯನ್ನು ಸುಖವಾಗಿ ಮಲಗಿ ಕಳೆದೆ. ದಿನಂಪ್ರತಿ ರಕ್ತಪಾನದಿಂದ ತೃಪ್ತವಾಗುವ ಮತ್ಕುಣ ಬಳಗದ ತೊಂದರೆಯಾಗಲೀ, ಗಂಧರ್ವ-ಕಿನ್ನರ ನಾಡಿನಿಂದ ಇಳಿದು ಬಂದವರಂತೆ, ದನಿತೆಗೆದು ಪೀಡಿಸುವ ಸೊಳ್ಳೆಗಳ ಕಿನ್ನರ ಗಾನವಾಗಲೀ ನಿತ್ಯದಂತೆ ಆ ರಾತ್ರಿಯೂ ಅಖಂಡವಾಗಿ ಸಾಗಿದ್ದರೂ, ಸುಖನಿದ್ರೆಯ ತಂದ್ರಿಯಲ್ಲಿ ಅದಾವುದರ ಬಾಧೆಯೂ ನನ್ನನ್ನು ತುಡುವಲಿಲ್ಲ.

ಚಹ ಸಿದ್ಧಪಡಿಸಿದ ನಂತರ ನಮ್ಮವರು ಬಂದು '' ಉಠೀ ಲವಕರೀ ವನಮಾಳೀ| ಉದಯಾಚಳೀಃ ಮಿತ್ರ ಆಲಾಃ '' ಎಂಬ ಜಾಗರ ಗೀತ ನುಡಿಸುವ ದನಿಮಾತ್ರ ಅಂದು ಕೇಳಬರಲಿಲ್ಲ. ಮುಸುಕಿನಲ್ಲಿಯೇ ಕೈ ಮುಸೆದುಕೊಂಡು '' ಕರಾಗ್ರೇ ವರ್ತತೇ ಲಕ್ಷ್ಮೀ, ಕರಮಧ್ಯೇ ಸರಸ್ವತೀ '' ಎಂದು ಮನಸ್ಸಿನಲ್ಲಿ ಗುಣಗುಣಿಸಿ ಹಾಸಿಗೆಯಲ್ಲಿ ಎದ್ದು ಕುಳಿತೆ; ಎದುರಿಗೆ ಅನತಿ ದೂರದಲ್ಲಿ ಹಾಸಿಗೆಯ ಮೇಲೆ ನಮ್ಮವರು, ವರುಷದ ಕೂಸು ಲತಿಯನ್ನು ಮಲಗಿಸಿಕೊಂಡು, ತಲೆಯ ಮೇಲೆ ಪ್ರೋಕ್ತವಾಗಿ ಸೆರಗೆಳೆದುಕೊಂಡು ಕುಳಿತಿದ್ದರು. ಎದೆ ಧಸ್ಸೆಂದಿತು. ಅವರು ಕುಳಿತ ಠೀವಿಯ, ರೀತಿ-ನೀತಿ ನೋಡಿದರೆ, ನನಗಿಂತಲೂ ಮುಂಚೆಯೇ ಅವರು ಮೂರು ದಿನದ ಶಿರಕಟ್ಟಿನ ರಜೆಗೆ ಅರ್ಜಿಯನ್ನು ಮುಂಚಾಚಿದ ಅವಲಕ್ಷಣತನ ಕಂಡಿತು.

ಅದನ್ನು ಆಡಿ ತೋರಿಸುವ ಧೈರ್ಯ ನನಗಾಗಲಿಲ್ಲ. ನನ್ನ ಮೌನ, ಅಸಹಾಯಕ ರೀತಿಯ ಮುಖಭಾವ ಕಂಡು ಅವರು ಮುಗುಳು ನಗೆಯನ್ನು ಮಿಂಚಿಸತೊಡಗಿದರು. ಬೇರೆ ಸಮಯವಲ್ಲಾಗಿದ್ದರೆ ಅವಕ್ಕೆ ಯೋಗ್ಯ ಉತ್ತರ ದೊರೆಯಬಹುದಾಗಿತ್ತು. ಸದ್ಯಕ್ಕಂತೂ ಅಂಥ ಪ್ರಸಾದ ಶಕ್ಯವಿರ ಲಿಲ್ಲ. ಆ ಶಿಲಾಪ್ರತಿಮೆ ಅಲ್ಲಾಡದೆ, ಮುಗುಳು ನಗೆಯ ಮಿಸುನಿಯನ್ನು ಮಾತ್ರ ಪ್ರದರ್ಶಿಸುತ್ತ ಕುಳಿತ ಶೀವಿಯ ಅರ್ಥಮಾಡಿಕೊಂಡೆ.

"ಮಂಟಪದತಿ ಯಾವಾಗ ಇಟ್ಟರಿ? ರಾಣೀ ಸರಕಾರದ ಪಟ್ಟಬಂಧನ ನಿನ್ನೆ ರಾತ್ರಿನೋ, ಏನ ಸೂರ್ಯೋದಯದ ಸುಮೂರ್ತಕ್ಕೋ?"

"ಅಖಂಡ ಮೂರ ದಿನದ ರಾಜ್ಯ ಕಾರಭಾರ ಅದ. ಇನ್ ನಿಮ್ಮದಃ ದರಬಾರಾ. ಆ ತೊಟ್ಟಲದಾಗಿನ ಅರಿವೀ ತಗೀರಿ ಒಂದಿಷ್ಟು. ಲತೀನ್ನ ಮಲ ಗಸ್ತೇನಿ, ತೊಡೀಮ್ಯಾಲ ಹಾಕ್ಕೊಂಡು ಕಾಲ ಜುಂ ಹಿಡಿದಾವಃ."

ಆಜ್ಞೆಯ ಪ್ರಥಮ ಶರಸಂಧಾನ! ಮೂರು ಹಗಲು, ಮೂರು ಇರುಳು. ಇಂಥ ಅಖಂಡ ಶರವೃಷ್ಟಿ ಬಾಧೆಯ ಕಲ್ಪನೆ ಬಂದು ಮೈ ಚಳಿ ತುಂಬಿದಂತಾ ಯಿತು.

ಮುಖಮಾರ್ಜನೆ ಮುಗಿಸಿದೆ. ಮೂರು ದಿನ ಬಿಡುವಿನ ಸುಖವನ್ನು ಅನುಭೋಗಿಸುವ ಕಲ್ಪನೆಗೂ ತರ್ಪಣ ಒಪ್ಪಿಸಿದೆ. ಸ್ಟೋ ಹೊತ್ತಿಸಿದೆ. ಅಂತೂ ಇಂತೂ ಚಹ ಮುಗಿಯಿತು. ನೀರಿನ ಬಂಬಿಗೆ ಉರುವಲು ತುರುಕಿ ಅದನ್ನು ಹೊತ್ತಿಸಿದೆ. ಒಲೆಯ ಮುಖ ಮಾರ್ಜನವೂ ನನ್ನ ಪಾಲಿಗೇ ಕಾದು ಕುಳಿತಿತ್ತು. ರಾಡಿ ನೀರಿನ ಸಾರಣೆ-ಕಾರಣೆಯಿಂದ ಅದನ್ನು ಪೂರೈಸುವ ಹೊತ್ತಿಗೆ ಒಂಬತ್ತೂವರೆ ಗಂಟೆಯಾಯಿತು. ಬಡ ಕಾರಕೂನರ ಆಪದ್ಬಂಧು, ಅಖಂಡ ಅಭಯದಾಯಿಯಾದ, "ಅಸ್ವಾಸ್ಥ್ಯದ" ಕಾರಣ ನಮೂದಿಸಿ ಮೇಹರಬಾನ್ ಸರಕಾರದ ಪ್ರತಿನಿಧಿಗಳಾದ ನಮ್ಮ ಸಾಹೇಬರ ಹುಜೂರಿಗೆ, ದೀನವಾಣಿಯಲ್ಲಿ, ಒಂದು ದಿನದ ಕಿರಕುಳ ರಜೆಯನ್ನು ಅನುಗ್ರಹಿಸಿ, ದಯ ಪಾಲಿಸಬೇಕೆಂದು ಸುಳ್ಳು ನೆವನದ ಅರ್ಜಿಯನ್ನು ಬರೆದು ಕಳಿಸಿದೆ.

ಆ ಮೇಲೆ ನಡೆಸಿದ ಕಾರ್ಯಕ್ರಮದ ವಿವರಗಳನ್ನು ಕೊಟ್ಟರೆ ನೀವೇನೋ ತಣಿಯಬಹುದು. ಓದಿ ಸುಖಿಸಬಹುದು. ಆದರೆ ನನ್ನ "ಥ"

ತನವ ಪ್ರದರ್ಶನ ಬೇಡವೆಂದು ಅವನ್ನು ಬಿಟ್ಟುಬಿಡುತ್ತೇನೆ. ತೂತಿಲ್ಲದ ದೋಸೆ ಸಿಗಬಹುದೇ? ನನ್ನ ಅಸಹಾಯಕತೆ, ಪಟ್ಟಪಾಡು ನಿಮಗೂ ಕೂಡ ಹೊರ ತಾಗಿಲ್ಲವೆಂದು ನನ್ನ ಭಾವನೆ. ಒಂದಿಲ್ಲ ಒಂದು ಸಲ ಅಂಥ ದಿವ್ಯ ಅನುಭವ ತಮಗೂ ಬಂದಿರಲು ಸಾಕು.

ನಾನಿಷ್ಟು ನಿರಾಧಾರನಾಗಿ ಅಡುಗೆಯ ಕಾಳಿಗವ ಕಣಕ್ಕಿಳಿದರೂ, ಅದನ್ನು ಲೆಕ್ಕಿಸದೆ, ನಮ್ಮ ರಾಣೀಸಾಹೇಬರು ಅದುಗೆಯ ಮನೆಯ ಬಾಗಿ ಲಲ್ಲಿ ನಿಂತು, "ಆ ಓತ್ತಾಳೀ ಡಬ್ಬೀ ಅಚೀಕಡೆ, ಕೊಂಡೀ ಡಬ್ಬ್ಯಾಗ ಹಳ ಮಾಡಿದ ಬ್ಯಾಳಿ ಅವs. ಒಳಗ ಕಪಾಟಿನ್ಯಾಗ ಕೊಳಗ ಅದs ನೋಡ್ರಿ, ಅದರ ತೆಳಗs ಅಕ್ಕಿ ಡಬ್ಬಿ ಅದ. ಉಳದ ಸಾಮಾನು ಹಾಲೂ-ಮಸರಿನ ಕಪಾಟಿನ್ಯಾಗs ಅವ. ಹುಳೀಗೇನು ಅವರೀಕಾಯೀ ಹಾಕತೀರೋ, ಬದ್ನಿ ಕಾಯನೋ? ಈಗs ಬೇಕಾರ ಹೆಚ್ಚಿ ಇಟಗೊಂಡ ಬಿಡ್ರಿ. ಕಣಕಾನೂ ಬೇಕಾರ ಕಲಿಸಿ ಇಡತೀರೇನ ನೋಡ್ರಿ. ನನಗೇನ ಇನ್ನ ಎರಡನೇ ಸಾರೆ ಚಹಾನೂ ಬ್ಯಾಡಾ, ಏನೂ ಬ್ಯಾಡಾ. ಸುಬ್ಬಕ್ಕನ ಮನೀಗೆ ಹೋಗತೀನಿ; ಅಲ್ಲೆ ಆಗೇ ಆಗತದ. ಲತಿಗೆ ಹಾಲನೂ ಸುಬ್ಬಕ್ಕನ ಮನ್ಯಾಗs ಹಾಕತೀನಿ. ಶ್ಯಾಮಾ, ಪಬೀ ಇಲ್ಲೇ ಆಡತಿರಲಿ; ನಾ, ಬಾರಾಕ್ಕ ಬಂದರ ನಡದೀತಲಾ?" ....ಶರಸಂಧಾನ ಸಮಾಪ್ತವಾದಾಗ ನಾನು ಗತಪ್ರಾಣನಾಗಿದ್ದೆ.

ಅವರು ರಾಜ್ಞಿಯ ಠೀವಿಯಲ್ಲಿ ಸುಬ್ಬಕ್ಕನ ಮನೆಗೆ ನಡೆದುಬಿಟ್ಟರು. ಚಿರಂಜೀವ ಶ್ಯಾಮರಾಯನೂ ಕುಮಾರಿ ಪ್ರಭಾವತಿಯೂ (ಶ್ಯಾಮ-ಪಬಿ) ಅಪ್ಪನ ವಲಲ ವೈಭವ ನೋಡಲಿಕ್ಕೆ ಮನೆಯಲ್ಲಿಯೇ ಉಳಿದರು. ಲತಿ ಯನ್ನೂ ಸಂಬಾಳಿಸುವ ಕ್ಷುಲ್ಲಕ ಹೊಣೆಯನ್ನು ನನ್ನ ಮೇಲೆ ಹಾಕದ ಬಗ್ಗೆ ರಾಣಿಯವರಿಗೆ ಮನಃಪೂರ್ವಕ ಮನಸ್ಸಿನಲ್ಲಿ ವಂದಿಸಿದೆ. ಕುದಿಯುವ ಸಿಟ್ಟು, ಕಿಡಿ ಹಾರಿಸುವ ಸಾಮರ್ಥ್ಯವನ್ನೂ ಕಳೆದುಕೊಂಡಿತ್ತು. ಹೆಡೆಯಾಡಿಸಿ ಹೆದರಿಸುವ ತ್ರಾಣವೂ ಅದರಲ್ಲಿ ಉಳಿದಿರಲಿಲ್ಲ.

ಓತ್ತಾಳೀ ಡಬ್ಬಿಯ ಆಚೆಯ ಕಡೆಗೆ ಅವಿತುಕೊಂಡ, ಕೊಂಡಿಯ ಡಬ್ಬಿಯಲ್ಲಿಯ ಹಳಮಾಡಿದ ಬೇಳೆಯ ಸಂಶೋಧನೆಗೆ ತೊಡಗಿದೆ. ಬಾಯೀ ಯವರು "ಬಾರಾ" ಗಂಟೆಗೆ ಬರುವವರಿದ್ದರು. ಪಾಕಸಿದ್ಧತೆಯಾಗಿರ ದಿದ್ದರೆ ಮತ್ತೆ ಮೂಗು ಮುರಿಯುವದು, ಮುಗುಳು ನಗೆ ನಗುವದು, ತೀರ

ಕ್ಷುಲ್ಲಕನೆಂದು ಬಗೆದಂತೆ ಭಾವಿಸಿ, ಲಘುಹಾಸ್ಯ ಬೀರುವ ಶರಾಘಾತವನ್ನು ಯಾರು ತಾಳಿಯಾರು ? ಬೇಳೆಯನ್ನು ಬೇಯಿಸಲಿಕ್ಕಿಟ್ಟು, ಒಂದು 'ಆನೆಯ ಛಾಪ' ಬಿಳಿ ಬತ್ತಿಯನ್ನು ಹಚ್ಚಿ "ಆಪ್ಯಾಯಮಾನವಾಗಿ ಹೊಗೆ ಬಿಡುತ್ತ ಒಲೆಯ ಮುಂದೆ ಸ್ಥಾನಾಪನ್ನನಾದೆ.

ಬಾಯೀಯವರ ಸವಾರಿ ಆಗಮಿಸುವದರೊಳಗಾಗಿ, ಅಡಿಗೆಮಾಡಿ, ಹುಡುಗರ ಊಟವನ್ನು ಮುಗಿಸಿದೆ. ರಾಣಿಯವರ ಎಲೆ ಮಂಡಿಸಿ ದಾರಿ ಕಾಯುತ್ತ ಕುಳಿತಿರುವಾಗಲೇ ಅವರು 'ರಾಯಿಟ್ ಟಾಯಿಮ್' ಬಿಜಯಿಸಿದರು. "ಹುಡುಗರೂಟಾ ಆತೇನು ಇಷ್ಟರಾಗಽ. ಗಡಿಬಿಡಿಮಾಡಿ, ಅನ್ನಾಽ ಏನ ಹಂಜಕ್ಕೀನಽ ಇಳಿಸಿದರೋ ಏನೋ ? ಚಪಾತೀ ವರ್ಜ್ಯ ಮಾಡಿದಿರಿ ಕಾಣಸ್ತದಽ. ಅಂತೂ ಒಂದ ಒಪ್ಪತ್ತ ಗೆದ್ದರಿ! ಇಂದ ಟಪಾಲೇನ ಇದ್ದಾಂಗ ಕಾಣಸೂದಿಲ್ಲಾ ? ನಮ್ಮ ಸುಮಾನ ಕಾಗದಾ ಜರೂರ ಬರಬೇಕಾಗಿತ್ತು. ಈ ತಂಬಿಗ್ಗಿಷ್ಟು ನೀರ ಹಾಕರಿ. ನಾನೂ ಊಟಾ ಮುಗಸ್ತೇನಿ. ನೀವೂ ಬೇಕಾರ ಬಡಿಸಿಕೊಂಡು ಬಿಡ್ರಿ. ಶ್ಯಾಮಾ ಪಬೀ, ಸಾಕ ಬೇಕ ಕೇಳತಾರಽ."

ಬೆಳಗಿನಿಂದಲೂ ನಾನು ಒಂದು ತುಟಿ ಎರಡು ಮಾಡಿರಲ್ಲ. 'ಬ್ರ' ಎಂದಿರಲಿಲ್ಲ. ಸಂಕಟಪಟ್ಟು "ಬಾಃರಾ"ದೊಳಗೇ ಅಡುಗೆ ಮಾಡಿ, ಹುಡುಗರ ಊಟ ಬಗೆ ಹರಿಸಿದ್ದರೂ "ಹಂಜಕ್ಕಿ ಅನ್ನ, ಚಪಾತಿ ವರ್ಜ" ಶರಾ ಬಂದು ನನ್ನ ಅಭಿಮಾನ ಕೆರಳಿಸಿದವು. ಅವರು ಮಾತನಾಡುವ ರೀತಿಯು ಕೊಂಕು ಎದೆಯನ್ನು ಕುಟುಕುತ್ತಿತ್ತು. ಮದುವೆಯಾಗಿ ಹತ್ತುವರುಷ ನಾವು ಸಂಸಾರ ಮಾಡುತ್ತ ಬಂದಿದ್ದೇವೆ. ಅವಳೂ ಮೂರು ಮಕ್ಕಳ ತಾಯಿಯಾಗಿದ್ದಾಳೆ. ಆದರೂ ಒಂದು ದಿನ ಹುಸಿಹೋಗಗೊಡದೆ, ಅಡಿಗೆಗೆ, ತಿಂಡಿ-ತಿನಿಸಿಗೆ,—ನಿದಾನ ಚಹಾಕ್ಕಾದರೂ ಹೆಸರಿಡದೆ, ನಾನು ಉಂಡು ತಿಂದದ್ದು, ಈಗ್ಗ್ಯಾಗ್ಯೆ ತಪ್ಪಿಲ್ಲ. ಬಸಿರು ಬಾಣಂತಿತನದ ಅವಧಿಯನ್ನು ಬಿಟ್ಟು, ಉಳಿದ ದಿನಗಳಲ್ಲಿ, ಅವಳು ಪಡೆಯುವ ಈ ಮೂರು, ಒಮ್ಮೊಮ್ಮೆ ಎರಡು-ಎರಡೂವರೆ, ದಿನಗಳ ಕಿರುಕಳ ರಜೆಯಲ್ಲಿ ಮಾತ್ರ, ನನ್ನ ಮಾತಿನ, ಟೀಕೆಯ ತಿರುಗುಪ್ಪುಕೊಡಲು ಅವಳೆಂದೂ ಅಸಿಮಿಸಿ ನೋಡುವದಿಲ್ಲ. ದಯೆ, ಕಾರುಣ್ಯ, ಪ್ರೀತಿ, ವಾತ್ಸಲ್ಯ ಯಾವೂ ನೆರವಿಗೆ ಬರುವದಿಲ್ಲ. ಕಚೇರಿ ಇದ್ದ ದಿನ, ಅವಳು ಹೊರಗೆ ಕುಳಿತಿರಬೇಕು, ನಾನು ವಲಲ

ವೇಷವಲ್ಲಿ ಅನ್ನಪೂರ್ಣೆಯ ಅರ್ಚನಾಭಿಷೇಕನಿರತನಾಗಿರಬೇಕು, ಆಗ ಹತ್ತು ಹದಿನೈದು ನಿಮಿಷಕ್ಕೊಮ್ಮೆ ಒಳಗೆ ಹಣಿಕಿಕ್ಕಿ, "ಸಾಡೇ ಣೌಂವ ಆತೂ ಅಂದೆ! ಇನ್ನಾs ಬ್ಯಾಳೀನs ಬೆಂದಿಲ್ಲಾ. ರಜದ ಚೀಟೀಯರೆ ಕಳಸತೀರೇನು ನೋಡ್ರಿ" ಎಂದು ಹಾಡಿನ ಧಾಟಿಯಲ್ಲಿ ನುಡಿದು ನಕ್ಕರೆ, ಯಾವ ಗಂಡ ನೆಂಬ ಪ್ರಾಣಿ ಅದನ್ನು ಮುಕ್ಕಟಿಯಾಗಿ ಸಹಿಸಿಯಾನು? ಹಾಗೆ ಸಹಿಸಿಲ್ಲ ವೆಂದು ಎದೆತಟ್ಟಿ ಹೇಳುವ ಧೈರ್ಯವಿದೆಯೇ? ಹಾಗಿದ್ದರೆ ಹೇಳಿ?

ರಾಣಿಯುವರು ಆಗಲೇ ಅಂದ ಮಾತನ್ನು ಚಾಚೂ ಎನ್ನದೆ ಗಂಟ ಲಿನ ಕೆಳಗೆ ನೂಕಿ "ತಾವು ಭೋಜನ ತೀರಿಸಬಹುದು. ಹೊತ್ತಾಗಿದೆ" ಎಂದೆ. ಅವರಿಗೂ ಅಷ್ಟೇ ಬೇಕಾಗಿತ್ತು. ನಗು ನಗುತ್ತ ಪಟ್ಟನೆ ಎಲೆಯ ಮುಂದೆ ಮಂಡಿತರಾಗಿ, "ಈ ಪಂಕ್ತಿ ಪ್ರಪಂಚ ಯಾಕs. ನನಗ ಬಡಸ ಲಿಕ್ಕೇನು ಕೈ ಕಟಗೊಂಡ ನಿಂದರ ಬೇಕಾಗಿಲ್ಲಾ. ಅನ್ನಾ, ಹುಳೀದು ನಡವs ಇಟ್ಟಬಿಡ್ರಿ. ನನಗೊಂದಿಷ್ಟ ಹೆಚ್ಚ ಬಡಿಸಿದರೀ ಅಂದ್ರು ತೀರಿತು. ನೋಡರಿ, ನಿಮಗ ಹ್ಯಾಂಗ ಸರೀ ಕಾಣಸ್ತದ ಹಾಂಗ ಮಾಡರಿ. ಆ ಹುಳೀ ಹಿಂಗ್ಯಾಕ ಪುರಮಂಜಿನ್ಹಾಂಗ ಆಗೇದs. ಭರಣ್ಯಾಗಿನ ಖಾರಪುಡೀ ಎಲ್ಲಾs ಬಸಧಾಂಗ ಕಾಣಸ್ತದ. ಒಂದ ಘಳಿಗಿ ನಾ ಅಕಡಿಕಡೆ ಆದೇ ಅಂದ್ರು ಮುಗದs ಹೋತು. ಮೂರ ದಿನದಾಗ ಮನೀ ರಾಮುರಕ್ಷ ಮಾಡತೀರಿ."

ಅಷ್ಟರಲ್ಲಿಯೇ ಕುಮಾರ ಶಾಮರಾಯರೂ, ಕುಮಾರಿ ಪ್ರಭಾವತಿಯೂ ನೆಗೆಯುತ್ತ, ಹೇಳಿಕಳಿಸಿದವರಂತೆ, ಬಂದರು. ಈ ಬಿನ್ ಪಗಾರೀ, ಸಿ. ಆಯ್. ಡಿ. ಗಳ ವರದಿಯಿಂದ ನನ್ನ ಅಡುಗೆಯ ರುಚಿ-ವೈಚಿತ್ರ್ಯ, ಭೋಜನ ಪೂರ್ವದಲ್ಲಿಯೇ ರಾಣಿಯವರಿಗೆ ವಿದಿತವಾಗಬಾರದೆಂಬ, ಮುಂದಾ ಲೋಚನೆಯಿಂದ, ಊಟಕ್ಕೆ ಕುಳಿತಾಗ, ಅವರಿಬ್ಬರಿಗೂ ಮಾವಿನಕಾಯಿಯ ಗುಳುಂಬದ ಲಂಚಕೊಟ್ಟು ಒಲಿಸಿಕೊಂಡಿದ್ದೆ. ಅದರಿಂದ ಅವರು "ಖುಷ್" ಆಗಿದ್ದರು. ನನ್ನ ಬಂಡ ಹೊರಬೀಳಲು ಅದರಿಂದ ಅವಕಾಶವಾಗಲಿಲ್ಲ. ಇಲ್ಲದಿದ್ದರೆ ಚಟ್ನಿಗೆ ಒಗ್ಗರಣೆ ಕೊಡಬೇಕೆಂದು, ಒಲೆಯ ಮೇಲಿಟ್ಟ ಕಬ್ಬಿಣ ಸೌಟಿನಲ್ಲಿಯ ಎಣ್ಣೆ, ಒಂದು ಕೈಯಲ್ಲಿ ಸಿಗರೇಟಿದ್ದ ಕಾರಣ, ಉರುಳಿ ಒಲೆಯಲ್ಲಿ ಚೆಲ್ಲಿ-ಭಗ್ಗನೆ ಉರಿ ಎದ್ದು, ಜಾತವೇದ ಮೂಲಸ್ವರೂಪ ದಲ್ಲಿ ದರ್ಶನಕೊಟ್ಟಂತಾಗಿತ್ತು. ಅದೇನಾದರೂ ರಾಣಿಯವರ ಕಿವಿಗೆ ಬಿದ್ದಿ

ದ್ದರೆ ಮತ್ತೆ “ಪತ್ರಂ, ಪುಷ್ಪಂ, ಫಲಂ, ತೋಯಂ”ದ ಅರ್ಚನೆಯಾಗುತ್ತಿತ್ತು.

ರಾಣೀ ಸರಕಾರದ ಊಟ ಸಾಗಿತ್ತು. Running Commentaryಯ ಬಗ್ಗೆ ಹೆಚ್ಚು ಹೇಳುವ ಅಗತ್ಯವಿಲ್ಲ. ‘ಹುಳಿಗೆ ಎಂಣೆ ಹೆಚ್ಚಾಗಿದೆ, ಉಪ್ಪು ಸಾಲದು, ಬದನೇಕಾಯಿ ಹೋಳು ಗಾತ್ರದಲ್ಲಿ ಕಾಯಿಗಿಂತ ಹಿರಿದು, ಹಸೀ ಖೊಬ್ಬರೀ, ಕೋತಂಬರಿ, ಕರಿಬೇವು, ಕೈಸಡಿಲು ಬಿಟ್ಟು ಹಾಕಿದರೆ ಯಾರೂ ನಳಪಾಕ ಮಾಡುತ್ತಾರೆ’–ಕೊನೆಯ ಶರಾ ಬರೆದು ಊಟ ಮುಗಿಸಿ, ಮುಖ ಶುದ್ಧಿಗೆಂದು ಅಡಿಕೆ, ಲಾವಂಗ ತೆಗೆಸಿಕೊಂಡು ಅವರು ಪಡಸಾಲೆಗೆ ತೆರಳಿದರು. ಆಯಿತು; ಇನ್ನು ನಿವಾಂತವಾಗಿ ಊಟ ಮಾಡೋಣ, ಅವರ ಮಾತಿನ ಪ್ರಸಾದ, ಈಗಲಾದರೂ ಒಂದು ಹತ್ತು ನಿಮಿಷ ದೊರಕದು ಎಂದು ಭಾವಿಸಿ, ಹುಲಿಯ ದವಡೆಯಿಂದ ನುಸುಳಿದ ಕುರಿಯಂತೆ ಹೀನ-ದೀನನಾಗಿ ನಾನು ಊಟದ ಶಾಸ್ತ್ರ ಮುಗಿಸತೊಡಗಿದೆ. ಅವರು ಅದೇ ಬಂದ “ಸಂ. ಕ” ವಾಚನದಲ್ಲಿ ಮಗ್ನರಾದದ್ದು ಕಂಡುಬಂತು. ಸಂಪಾದಕರಿಗೆ ಉದ್ದಂಡ ಆಯುಷ್ಯ ಕೋರಿದೆ, ಕುತ್ತಿನಿಂದ ಪಾರುಮಾಡಿದ್ದಕ್ಕೆ.

ಊಟ ಮುಗಿಸಿ, ಮುಸುರೆ ಎತ್ತಿಹಾಕಿ ನಾನು ಯಾವಾಗ ಮಲಗಿಕೊಂಡೆನೋ ಅರಿಯೆ. ಅಂತೂ ತಿರುಗಿ ಎದ್ದಾಗ ನಾಲ್ಕು ಗಂಟೆಯಾಗಿತ್ತು. ನಾನು ಪಡಸಾಲೆಗೆ ಬರಲೇ ಇಲ್ಲ; ಯಾಕಂದರೆ “ಅವರು” ವಾಮಕುಕ್ಷಿಯಾಗಿ ನನಗಿಂತಲೂ ಮುಂಚೆಯೇ ಎದ್ದು ಚಹದ ದಾರಿಯನ್ನು ಕಾಯುತ್ತ ಪಡಸಾಲೆಯಲ್ಲಿ ಕುಳಿತಿದ್ದರು. ಮುಖ ತೊಳೆದುಕೊಂಡು, ಚಹ ತಯಾರಿಸಿ “ಪಬೀ, ಶ್ಯಾಮಾ ಚಹಾ ಕುಡೀಲಿಕ್ಕೆ ಬರ್ರಿ. ನಿಮಗೂ ಆಮಂತ್ರಣ ಇಲ್ದಽ ನಡಿಯೂದಿಲ್ಲೇನು?” ಮಾತು, ಶ್ಯಾಮ, ಪಬಿಯವರನ್ನು ಕುರಿತು ಆಡಿದ್ದಲ್ಲ—ಅವರ ತಾಯಿಯನ್ನು, ಎನ್ನುವದು ಹಗಲಿನಷ್ಟು ನಿಚ್ಚಳ. ಅವರು ನನ್ನ ನಿರ್ವಿಕಾರ ಮುಖ ನೋಡಿ, ಮುಗುಳು ನಗೆ ನಗುತ್ತ ತಮಗಾಗಿ ಮೂರು ದಿನ ಮೀಸಲಾದ ಕಪ್ಪು-ಬಸಿಯನ್ನು ನನ್ನ ಮುಂದೆ ಸರಿಸಿದರು. ಚಹಾಪಾನ ನಡೆದಿರುವಾಗ “ಟಪಾಲ ಬಂದಽದ ನೋಡಿದಿರೇನು? ವೈನೀ ಪತ್ರ ಬಂದದ. ನನಗೊಂದ ಹದಿನೈದ ದಿನಾ ವಿಶ್ರಾಂತೀ ಅಂತ ಬಂದ ಹೋಗಂತ.”

“ ಹೂಂ ”

“ ಹೂಂ ಯಾತಕಂತ ಅಂದ್ರಿ. ಪತ್ರ ಬಂದದ್ದಕ್ಕೊ, ಏನ ನಾ ಊರಿಗೆ ಹೋಗೂವಕ್ಕೋ.”

“ ಈ ಚಹಾದ ಭಾಂಡಿ, ಕಪ್ಪೂ-ಬಸೀ ಅಷ್ಟ ತೊಳದ ಇಡತೇನಿ, ಆ ವ್ಯಾಲ ಆರಾಮಾಗಿ ಕೂತು ಪತ್ರಾ ಓದೂಣಂತ, ಏನ ಅಂಥಾ ಗಡಿಬಿಡಿ.”

೩-೪ ಕಾಗದಗಳಿದ್ದವು. ಓದಿ ಮುಗಿಸಿದೆ. ಯಾರದೋ ಲಗ್ನ-ಮುಂಜಿವೆಯುದಿರಬೇಕು. ಔಪಚಾರಿಕ ಔತಣದ ಬುಕ್‌ಪೋಸ್ಟ. ಅದನ್ನೂ ನಮ್ಮವರು ವಿವರವಾಗಿ ಓದಿ ಮನನ ಮಾಡಿದ್ದರು. ನಾನದನ್ನು ಅಷ್ಟು ಲಕ್ಷ್ಯಪೂರ್ವಕವಾಗಿ ಓದಿರಲಿಲ್ಲ. ಲಗ್ನದ ಸುಗ್ಗಿಯೇ ಎದ್ದಿತ್ತು. ಯಾರು ಯಾರಿಂದಲೋ ಆಮಂತ್ರಣ ಬರುತ್ತಿವೆ. ಅವೆಲ್ಲವನ್ನೂ ಎಲ್ಲಿ ಓದುವದು? ಹತ್ತಿರ ಬಳಗದವರಲ್ಲಿ, ಗೆಳೆಯರಲ್ಲಿ, ಮದುವೆ, ಮುಂಜಿವೆ ಇದ್ದರೆ ಇಂಥ B. P. ಬರುವವೇ ? ಆಗ್ರಹದ ಆಮಂತ್ರಣ, ಒತ್ತಾಯದ ಕರೆ ಬಂದೇ ಬರುತ್ತಿವೆ. ಪ್ರತ್ಯಕ್ಷವಾಗಿ ಉಪಸ್ಥಿತವಾಗುವದು ಆಗದಿದ್ದರೂ M. O. ದಿಂದ ಲಾದರೂ ಆಹೇರಿ ಕಳಿಸುವ ಶಿಕ್ಷೆ ತಪ್ಪಿದ್ದಲ್ಲ. ಕೊನೆಗೆ ಶುಭಚಿಂತನೆಯ ತಂತಿ ಕಳಿಸಿ ಅಂಚೆ ಖಾತೆಯ ಉತ್ಪನ್ನ ವರ್ಧನೆಗೆ ನೆರವಾಗುವದಂತೂ ಬಿಟ್ಟಿದ್ದಲ್ಲ. ಹೀಗಾಗಿ ನಾನು ಆ ಆಮಂತ್ರಣ ಪತ್ರಿಕೆಯನ್ನು ಅರೆ-ಅರ್ಧ ಓದಿ ಮರೆತುಬಿಟ್ಟಿದ್ದೆ.

ರಾಣೀಸಾಹೇಬರು ಅಲ್ಲೇ ತಮ್ಮ ನಿರ್ದಿಷ್ಟ ಸಿಂಹಾಸನದ ಮೇಲೆ ಮಂಡಿಸಿದ್ದರು. ನಾನು ಪತ್ರವಾಚನ ಮುಗಿಸಿ ಇನ್ನು ‘ಸಂ. ಕ’ ಓದಲೆಂದು ಎತ್ತಿಕೊಳ್ಳುವವ. “ ಇಂದೇನ ಇಲ್ಲ ತಗೀರಿ ಅದರಾಗ, ಘಾರಿಕಶಿಬಿ ನೋಟಿಸ ಸುದ್ದಕ ಇಲ್ಲಾ ಓದೇನಂದ್ರು. ಬಾಬೂನ ಲಗ್ನಪತ್ರಾ ನೋಡಿದಿ ರೇನು ” ಎಂದರು.

“ ಯಾವ ಅಂವಾ ಬಂಗಾಲೀ ಬಾಬೂಕ ” ನಾನೆಂದೆ.

“ ಬಂಗಾಲೀ ಬಾಬೂ ಅಲ್ಲಾ. ಬಾಜೀರಾಯರ ಅಂಣನ ಮಗಾ. ಏನ ಗೊತ್ತಕ ಇಲ್ಲದವರ್ಹಾಂಗ ಮಾತಾಡ್ತೀರಲಾ. ಅವನ ತಂಗೀ ಲಗ್ನದ ದಶಿಂದ ಇಷ್ಟದಿನಾ ತಡದ ನಿಂತಿತ್ತು. ಲಗ್ನಕ್ಕ ಹೋಗಾವರೇನು ?”

“ಇದ್ನೋಡು. ಇತಿಹಾಸದಾಗ, ಒಬ್ಬಿಬ್ಬ ಬಾಜೀರಾಯರು ಆಗಿ ಹೋದ್ರೂ ಅಂತ ಓದಿದ್ದೆ. ಅವರು ಆಗೇ ಹಳೀಮಾತ ಆಗಿಹೋತು. ಇನ್ನ ಅವರ ಅಂಣನ ಕುಲಗೋತ್ರಾ ಎಲ್ಲಿ ಹುಡಕಲಿ ?”

“ಅಷ್ಟ ದೂರ ಹೋಗೋದೇನ ಬ್ಯಾಡಾ. ತಮಗ ಬ್ಯಾಡಾತು ಅಂದ್ರu ಇಲ್ಲದ ಕೊಂಕಮಾತು ಮಾತಾಡೂದು. ನಮ್ಮ ಅಕ್ಕನ ಗಂಡಾ, ನಾನಾಸಾಹೇಬರ ತಂಗೀ ಯಜಮಾನರು, ಬಾಜೀರಾಯರು ಅನೂದೇನ ಅರೀದ್ದ ನಿಮಗu.”

“ಅವರು ಬಾಜೀರಾಯರು ಅನೂದ ಖರೇ. ಈಗ ಧ್ಯಾನಕ್ಕ ಬಂತು. ನಿಮ್ಮ ತೌರಮನೀ ವಂಶವೃಕ್ಷದಾಗ, ನಾನಾಸಾಹೇಬ, ಬಾಬಾಸಾಹೇಬ, ಬಾಜೀರಾವ್ ಭರತೀ ಆಗಿ, ದಿಕ್ಕ ತಪ್ಪಿದ್ಹಾಂಗ ಆಗತದ, ಹುಡಕವರಿಗೆ. ಬಿಳೀ ಸಾಹೇಬರು ಹೋದರೂ, ಈ ಗಾಂವಠೀ ಸಾಹೇಬರು ಇನ್ನೂ ತಳಾನu ಹಿಡದಾರ. ಈ ಬಾಬೂರಾವ್, ಇವರೇನು ಖಾಲೀ ಬಾಬುರಾವ್ಪೋ, ಮತ್ತೇನ ಉರಫ್–ಸಿರಿಫ್‌ದ ವ್ಯಾಧೀ ಅದನೋ ! ಬಾಜೀರಾಯರ ಅಂಣನ ಮಗಾ ಅಂದ ಮ್ಯಾಲu ವಿಶೇಷಣ ಇಲ್ದu ಹ್ಯಾಂಗ ಇದ್ದಾನು ?”

“ನಮ್ಮ ತೌರಮನೀ ಸುದ್ದೀ ತಗೀತು ಅಂದ್ರ ನಾಲಿಗಿ ಚುಟು ಚುಟು ಅಲ್ಲಿಕ್ಕೆ ಸುರುವu. ಸಹಜಾಸಹಜೀ ಒಂದ ಛೆಂದ ಹೆಸರೂ ನಿಮಗ ಸಹನ ಆಗೂದಿಲ್ಲಾ. ಅವರ ದಶಿಂದ ಯ್ಯಾಂಸಿ–ದೀಡಿ ಆಡವ ಇದ್ದರ ಸಮಾಧಾನನu ಇಲ್ಲಾ. ಬಾಬೂ ಏನ ನಿಮಗ ಅರೀದ ಹುಡಗನu. ನಿಮ್ಮ ಆಫೀಸಿನ್ಯಾಗu ಮುಂಚೆ ಟಾಯಪಿಸ್ಟ ಅಂತ ಇದ್ದಾ.”

“ಆಂu, ಹಾಂu, ಆ ಬಾಬೂರಾಯರu. ಅವರಿಗೂ ಏನ ಉರ್ಫ ವ್ಯಾಧೀ ಬಿಟ್ಟಿಲ್ಲಾ. ರಾಮರಾವ್ ಉರ್ಫ ಬಾಬೂರಾವ್ ಅದನu ಅದ. ಅಂವಗ ಈಗ ಮಕ್ಕಳಾಗೂ ದಿವಸಾ. ಈಗ ಮಾಡತಾರಂತu ಮುಂಜ್ವೀ.”

“ನಿಮ್ಮ ತಲೀ ! ಮುಂಜ್ವೀ ಏನ ಮಾಡತಾರu. ಅದು ಮದವೀ ಪತ್ರಾ. ಒಂದೇನ ನೆಟ್ಟಗ ಓದೂಹಾಂಗಿಲ್ಲಾ, ಬಿಡೂಹಾಂಗಿಲ್ಲಾ.”

“ಅದರಾಗ ಚಕ್ಕ ಝುಳಾಝುಳಾ ಬರದu ದ “ಸಾಂಪ್ರತ ಮನೆಯಲ್ಲಿ ಶ್ರೀಹರೀ ಕೃಪೆಯಿಂದ.......”

"ಏನ ಮುಂಜಿವಿ ಅದ ಅಂತs." ಅವರು ನಡುವೆಯೇ ಬಾಯಿ ಹಾಕಿ ಕೇಳಿದರು.

"ನಾ ಅಂದರ ಏಕಪಾಠೀ! ಕಂಡೆದರಿಗೆ ಒಮ್ಮೆ ಹಾದದ್ದನ್ನ ಮರೆಯೂ ಜಾತಿ ಅಲ್ಲಾs. ಇದs ಈಗ ಓದೀನಿ ಪತ್ರಾ. ಅಕ್ಷರ ಅಕ್ಷರ ಏನ ಅದs ಅನೂದನ್ನ ಬೇಕಾರ ಹೇಳತೀನಿ. ನಾವೇನು ಬಾಜೀರಾಯರ ಗೋತ್ರದವರಲ್ಲಾ, ಢ ಗಿರಾಕಿಗೋಳು."

"ಏನ ಅಗದೀ ಬೃಹಸ್ಪತಿ ಅವತಾರಾ ಹೇಳೂ ಹಾಂಗಿಲ್ಲಾ. ನಮ್ಮ ಬಳಗದಾಗ ಏನ ಎಲ್ಲಾರೂ ಅಕ್ಷರ ಶತ್ರೂನ ಇದ್ದಾರs. ಅವರ ಮಾತ ತಗಿಯೂದs ತಡಾ, ಢ, ಢ ಅಂತ ಹಂಗಸೂದು. ಆ ಪತ್ರಾ ಲಗ್ನಂದು, ಮುಂಜ್ವೀದಲ್ಲಾ ಅಂತ ಅಂದದ್ದಕ್ಕ ಇಷ್ಟ ಕಿಲಾಪಾ. ಖರೇ, ಖೊಟ್ಟಿ ಮಾಡಬೇಕಾಗಿದ್ರ ಇನ್ನೊಮ್ಮೆ ಓದಿ ನೋಡ್ರಿ ಬೇಕಾರ. ನಾ ಅನೂದು ಪಟಾಸ್ತದೋ ಇಲ್ಲೋ."

"ಕೈಯಾನ ಹುಂಣಿಗೆ ಕನಡಿ ಯಾಕs. ನಾ ಏನ ಅದನ್ನ ಓದಿಲ್ಲs, ನೋಡಿಲ್ಲs ನೀನs ಸಿದ್ದಿ ಗಂಡಾಗ ಓದಿಧಾಂಗ ಅದs. ಸುಮ್ಮನs ವಾದ ಹಾಕಬ್ಯಾಡಾ. ಪತ್ರಾ ಓದೂ ಮುಂದs ಅನಿಸ್ತ್ಯ. ಮುಂಜ್ವೀ ಇರದs ಕದಾಚಿತ್ ಮದಿವಿ ಇದ್ದರ ಸಾದಾ ಛಾಪೀ ಔತಣಾ ಹ್ಯಾಂಗ ಬರುತ್ತಿತ್ತು ಅಂತs. ನಿಮ್ಮ ಅಕ್ಕನ ಗಂಡನs ತಂಗೀ ಯುಜಮಾನ್ರು ಬಾಜೀರಾಯರ ಅಂಣನ ಮಗಂದು, ಮುಂಜ್ವೀ ಇರದs ಲಗ್ನನs ಇದ್ದರ ಖುದ್ದ ನಿನಗ, ಸಾಹಜೀಕ ನಿನ್ನ ಜೋಡಿ ನನಗs ಮನೀತನಕಾ ಬಂದೂ ಆಮಂತ್ರಣ ಕೊಡದs ಬರೇ ಮೂರ ದುಡ್ಡಿನ ಬೀ. ಪೀ. ಮ್ಯಾಲಿಂದ ಬಗೀಹರಿಸಿದ್ದರ, ದೇಶಪಾಂಡೇರ ಮನೆತನಕs ಬಟ್ಟಾ ಬರೂದು. ಇದು Commonsense ದ ಮಾತು. ಅದs ವಜ್ಜ್ಯಾs ಅಂದ ಮ್ಯಾಲ ಏನು, ಅದಕs ಅನೊದು ನಿನ್ನ ಬುದ್ಧೀ ಅಂದ್ರs.."

"ಹೌದು ಹೌದು; ನನ್ನ ಬುದ್ಧಿ ಮೊಳಕಾಲ ಕೆಳಗs. ಅಂತs ಹತ್ತ ವರಷ ಸಂಸಾರಾ ಮಾಡಿದಿರಿ ಕಾಣಸ್ತದ ಕೂಡಿ. ನಾವು ಮಡ್ಡರs ಅಂತ ತಿಳಿದೂ ತಿಳಿದೂ ನೀವ್ಯಾಕ ಶ್ಯಾಣ್ಯಾರು ಆ ಮನೆತನದ ಹುಡಗೀ ಜೋಡೀ ಹುರಗ್ಯಾಗ ಕೂತರೀ? ನಾ ಏನs ಅಲ್ಲಿ, ಏನs ಅಡಲಿ, ಅದನ್ನ ಬಿಡೂದು ಬಾಜೂಕ್ಕ, ತೌರಮನೀ ನಿಂದಾ ಮಾಡೂದು."

ಬೆಳಗಿನಿಂದಲೂ ಮುಗುಳು ನಗೆ ನಕ್ಕು ನಕ್ಕು, ಅಡುಗೆಯ ಮನೆಯಲ್ಲಿ ನಾನು ಪಡುವ ಪಾಡನ್ನು ಲಘುವಾಗಿ ಭಾವಿಸಿ, ಮಾತಿನ ಕೊಂಕಿನಿಂದ ತಿವಿದು, ನೋಯಿಸಿದ ಮಾಟ ಈಗ ಉಳಿದಿರಲಿಲ್ಲ. ತೌರಿನ ಅಭಿಮಾನ, ನನ್ನ ದೀಡಿಯ ಕಟು ನುಡಿಯನ್ನು ಸಹಿಸದ ಸಂತಾಪ ಒಟ್ಟುಗೂಡಿದ್ದವು. ಮುಖ ಆರಕ್ತವಾಗತೊಡಗಿತ್ತು. ಚಿಗುರೆಗಂಣಿನ ಚೆಲುವಿನಲ್ಲಿ ರೋಷದ ಝುಳುಕು ಮೂಡತೊಡಗಿತ್ತು. ಇನ್ನಷ್ಟು ಎಳೆದಿದ್ದರೆ ದಾರ ಹರಿದು, ರೋಷ ಮರೆಯಾಗಿ, ಗಂಗಾ, ಯಮುನಾ ಸಂಗಮವಾಗುತ್ತಿತ್ತು. ಮೂರು-ನಾಲ್ಕು ದಿನ ಮಾತು-ಕತೆಯಿಲ್ಲದೆ ಮುಸುಮುಸು-ದುಸುಮುಸು ನಡೆಯುತ್ತಿತ್ತು. ಊಟಕ್ಕೆ ಕುಳಿತಾಗ ಸಾಕು-ಬೇಕು, ಸನ್ನೆಯ ಮೇಲಿಂದ ಸಾಗುತ್ತಿತ್ತು. ಹತ್ತುವರುಷದ ಈ ಅವಧಿಯಲ್ಲಿ ಇಂಥ ಕೋಳಿ-ಕಾಳಗ ಹಲವಾಗಿವೆ. ಆದರಿಂದ ಯಾರೂ ನೊಂದಿಲ್ಲ. ಮನಸ್ಸೂ ಮುದುಡಿಲ್ಲ. ಸಿಟ್ಟಿನ ಕಾವು, ಅದರ ರಭಸ ಇಳಿದೊಡನೆ ಮತ್ತೆ ಎಲ್ಲ ಮರೆತು ಏನೂ ನಡೆದಿಲ್ಲವೆಂಬಂತೆ ಒಂದಾಗಿದ್ದೇವೆ. ಬಾಳಿನಲ್ಲಿ ಮತ್ತೆ ಮಾಂಗಲ್ಯ ಮೂಡಿದೆ. ಇಂಥ ನೆರಳು-ಬಿಸಿಲಾಟ ನಮಗೆ ಹೊಸದಲ್ಲ. ಇನ್ನಿಷ್ಟು ಕೆವಕಿಪರೆ ಸಿಟ್ಟಿಗೆದ್ದು ಲತಿಯನ್ನು ಕರೆದುಕೊಂಡು ಶ್ಯಾಮು, ಪಬಿಯನ್ನು ಮುಂಪೆ ಮಾಡಿಕೊಂಡು ಸುಬ್ಬಕ್ಕನ ಮನೆಗೆ ಹೋಗುತ್ತಾಳೆ. ಅಲ್ಲಿ ಹೋದನಂತರ ಸುಬ್ಬಕ್ಕ, ತಮ್ಮನ ಹೆಂಡತಿ-ಮಕ್ಕಳಿಗೆ ಚಹಾ-ಫರಾಳ-ಊಟ-ಉಡಿಗೆ ಮಾಡಿಸದೆ ಬಿಡುವದಿಲ್ಲ. ಸುಬ್ಬಕ್ಕನಿಗೆ ತನ್ನ ತಮ್ಮನ ಸತ್ಯ ಗೊತ್ತು. ಅಂತೂ ಸಂಜೆಯ ಮುಂದೆ ಒಲೆಯ ಆರಾಧನೆ ತಪ್ಪುತ್ತಿದೆ. Globeನಲ್ಲಿ "The Rains Came" ಸಿನೇಮಾ ಇದೆ. ನಾಟಕ ತಪ್ಪಿದರೂ ಸರಿ. ಸಿನೇಮಾದ ಸುಖವಾದರೂ ಸಿಗುತ್ತದೆ. ಇಂಥ ದಿವ್ಯ ಪ್ರಸಂಗ ಕೈಯಳತೆಯಲ್ಲಿರುವಾಗ ತಪ್ಪಿಸಿಕೊಂಡು ಹುಚ್ಚನಾಗಬಾರದು. ಬೇಟೆ ಎದ್ದಿದೆ, ನಾಯಿಯನ್ನು ಛೂ ಬಿಡದಿದ್ದರೆ ನಾನೆಂಥ ಬೇಟೆಗಾರ—ಎಂದು ಧೇನಿಸಿ,ಗುರಿ ನೋಡಿ ಶರಸಂಧಾನ ಮಾಡಿದೆ.

"ಶ್ಯಾಮರಾವ, ನಿಮ್ಮದೇನ ಚ್ಯೆನೀ ಆದಪಾ, ಮುಂಜಿವೀಗೆ ಹೋಗಾವ್ರು. ಬಾಜೀರಾಯರ ಅಣ್ಣನ ಮಗಾ ಮೂವತ್ತ ವರಷದ ವಟೂಗ ಆಶೀರ್ವಾದ ಮಾಡಾವ್ರು. ಇವರು ಇದರಿಗೇ ಕೂತಾರಲಾ, ಅವರು ಮಾತ್ರ ಭೋಜನಾ ಹಾಕಾವ್ರು....ಮಜಾ ಮಾಡತೀರಿ ಅನ್ನು. ಅಲ್ಲೋ ಆ ಪತ್ರಿಕ್ಕ

ಬಿದ್ದ ಮಡಿಕೀ ನೋಡಿದರ. ಅನಸ್ತದ, ಬಹುತೇಕ ಅದು ನಮಗ ಬಂದ ಮುಟ್ಟಲಿಕ್ಕೆ ಒಂದ ವರ್ಷರೆ ಪ್ರಯಾಣ ಮಾಡಿರಬೇಕಂತ. ಕದಾಚಿತ್ ಹೋದ ವರ್ಷs ಮುಂಜಿವಿ ಮುಗದಿರಬೇಕು. ಆತು, ಹೋದಾವ್ರು ಹೋಗಿರಿತೀರಿ, ನೋಡ್ರಿ, ಜಮಾಸಿದ್ರ ಮದಿವೀ ಅಕ್ಕೀಕಾಳ ಅಷ್ಟ ಹಾಕೇ ಬರ್ರಿ; ತಿಳಿತೇನ ಪಬೀ."

ಪಬೀಗೆ, ಶ್ಯಾಮನಿಗೆ ನನ್ನ ಮಾತಿನಲ್ಲೇನು ತಿಳಿಯಬೇಕು ? ಅವರ ತಾಯಿಗೆ, ನಮ್ಮ ಇವರಿಗೆ ಅರ್ಥವಾಗಿತ್ತು, ಅಷ್ಟೇ ! ಬಾಣ ಸರಿಯಾಗಿ ತೂರಿಹೋಗಿ ಗುರಿಯನ್ನು ಛೇದಿಸಿತು.

"ಶ್ಯಾಮಾs, ಪಬೀ, ಏನ ಕೌಲೆತ್ತಿನ್ಹಾಂಗ ಗೋಣ ಹಾಕ್ತೀರಿ. ಅವರಿಗೊಂದು ಉದ್ಯೋಗ ಇಲ್ಲಾ, ನಿಮಗೂ ಇಲ್ಲಾ. ಕಚೇರಿ ಬಿಟ್ಟು ಮನೀ ಹಿಡದಾರ. ಪ್ಯಾಳ್ಯಾ ಹ್ಯಾಂಗ ಹೋಗಬೇಕು. ಇಂಥಾದ್ದ ದೀಡೀ ಆಡೂದು— ಬೇಕಾರ ಕೇಳಕೋತ ಕೂಡ್ರಿ ಬೆಳತನಕಾ, ಅವರ ಮುಂದ. ನಾ ಹೋಗತೇನಿ ಸುಬ್ಬಕ್ಕನ ಮನೀಗೆ. ನೀವೂ ಬರ್ಾಂಗ ಇದ್ದರ, ಏಳರಿ ಚಟ್ಟನs."

ಅವಳು ಇಷ್ಟು ನುಡಿದು ಲತಿಯನ್ನು ಬಗಲಲ್ಲೆತ್ತಿಕೊಂಡು ಇನ್ನೇನು ಹೊರಗೆ ಹೊರಡುವಾಕೆ; ಅಷ್ಟರಲ್ಲಿ ಬಾಗಿಲಲ್ಲಿ ಟಾಂಗಾ ಬಂದು ನಿಂತ ಸಪ್ಪಳು ಕೇಳಿಸಿತು. ಕಿಟಕಿಯಿಂದ ನೋಡಿದೆ. ಬಾಜೀರಾಯರೂ ಅವರ ಕುಟುಂಬವೂ ಹೋಲ್ಡಾಲ್-ಟ್ರಂಕ ಸಮೇತ ಇಳಿದರು. ಟಾಂಗಾದವ ಅವರ ಸಾಮಾನು ತಂದಿಟ್ಟ. ಅವನಿಗೆ ಬಾಡಿಗೆ ಕೊಟ್ಟು ಬಾಜೀರಾಯರು ಒಳಗೆ ಬಂದು " ನಮಸ್ಕಾರ, ರಂಗರಾವ್. ಅಲಭ್ಯಲಾಭಾ. ಈ ಹೊತ್ತಿನ್ಯಾಗ ಮನ್ಯಾಗ ಇರತೀರೋ ಇಲ್ಲೋ ಅಂತ ಅನಮಾನ ಬಂದಿತ್ತು. ನೀವ್ ಆಫೀಸರ ಮಂದಿ. ಅವ್ಯಾಳ್ಯಾದಾಗ ಮನ್ಯಾಗ ಹ್ಯಾಂಗ ಇರತೀರಿ. ನಮ್ಮ ಸುದೈವs ಅನಬೇಕು. ಏನ ಉಷಾತಾಯೀ, ಹೊರಗ ಹೊರಡೂ ತಯಾರೀ ಕಾಣಸ್ತದ. ಸಿನೇಮಾ ಪಿನೇಮಾ ಬೇತ ಏನರs ಇತ್ತೇನ ಮತ್ತs. ನಮ್ಮಿಂದ ಅಡಥಳಾ ಆತೇನು ? ಹಾಂ. ಈಗೇನ ಮಾತನ್ಯಾಗ ಹೊತ್ತ ಕಳೀಲಿಕ್ಕ ವ್ಯಾಳ್ಯಾ ಎಲ್ಲ್ಯದ? ಊರಾಗ ಒಂದ ನೂರ ಮನೀ ಅವ, ಔತ್ಣಾ ಕೊಡೂವು. ನಮ್ಮ ಬಾಬೂನ ಲಗ್ನ ಠರಾಸೇದ. ನಿಮಗ ನೇಹಮೀ

ಹಾಂಗ ಲಗ್ನಪತ್ರಿಕಾ ಬಂದಿರಬೇಕು. ಅದೇನಂದಿ—ಪದ್ಧತಿ ಪ್ರಕಾರ ಕಳಸೂ ಹಾಂಗ ಕಳಿಸಿತು. ಸಮಕ್ಷಮ ಬರೂದಂತೂ ಇದ್ದs ಇತ್ತು. ರಾತ್ರೀ ಎಂಟರ ತನಕಾ ಮುಗದೀತಂತ ಅನಸತದ ಔತ್ನಾಕೊಡೂದು. ಊಟಾ ಉಡಿಗಿ ಬಗೀಹರಿಸಿ, ಕೂಡೂಣಂತ ಮಾತಾಡಿಕೋತ. ತಾಸರ್ಧಾ ತಾಸು ಹೆಚ್ಚಕಡಿಮಿ ಆದ್ರೂ ನಡೀತದ. ಹೌದಂತೀಯೋ, ಅಲ್ಲ ಅಂತಿಯೋ"…. ಇಷ್ಟು ಹೇಳಿ, ತಮ್ಮ ಕುಟುಂಬದ ಕಡೆಗೆ ತಿರುಗಿ "ಹೂಂ ನಡೀ ಇನ್ನ. ಅರಿವೀ–ಪಿರಿವೀ ಬದಲಾಸೂದಿದ್ರ ಮುಗಸ ಲಗೂನ. ಮಾತಿನ್ಯಾಗ ವ್ಯಾಳ್ಯಾ ಹಾಕಲಿಕ್ಕ ಹೊತ್ತ ಎಲ್ಲ್ಯದ. ಶಾಮನ್ನ, ಪಬೀನ್ನ ಕರಕೊಂಡ ಹೋಗೂಣು ಜೋಡೀಲೆ. ಟಾಂಗಾ ಅಂದರ ಹುಡಗರಿಗೆ ಮಜಾ."

ಬಾಜೀರಾಯರು ಮಾತು ಮುಗಿಸಿದರು. ನಮ್ಮ ಕುಟುಂಬ, ನನ್ನ ಕಡೆಗೆ ನೋಡಿ ಬೆಳಗಿನಲ್ಲಿ ಅರಳಿಸಿದಂಥ ತೆಳುಹಾಸ್ಯವನ್ನು ಬೀರಿ, ಕಂಣಿನಲ್ಲಿ ಎಂದಿಲ್ಲದ ಉಲುಕೋಚಿತನ ತೋರಿದಾಗ ನಾನು ನಾನಾಗಿರಲಿಲ್ಲ.

೧೦–೧೨–೫೫

# ನೆನಪಿನ ಗೋರಿ

ಅಂದು ಕಚೇರಿಗೆ ಬಿಡುವಿದ್ದ ಕಾರಣ—ಬೇಗನೇ ಊಟ ಮುಗಿಸಿ-ಮಲಾಡಿನಲ್ಲಿಯ ನನ್ನ ತಂಗಿಯ ಮನೆಗೆ ಹೋಗಿ ಬರುವ ಕಾರ್ಯಕ್ರಮ ವಿರಿಸಿಕೊಂಡಿದ್ದೆ. ಇಂದಿರೆ, ಹುಡುಗರೂ ಹೊರಡುವ ಸನ್ನಾಹದಲ್ಲಿದ್ದರು. ಅವರ ವೇಷ-ಭೂಷಣ ಮುಗಿಯಬೇಕಾದರೆ ಎಷ್ಟು ವೇಳೆಯೋ ಏನೋ ಎಂದು ಗ್ಯಾಲರಿಯಲ್ಲಿ ಒಂದು ಕುರ್ಚಿಯನ್ನೆಳೆದುಕೊಂಡು ಅಂದಿನ ಪೇಪರ ತಿರುವಿ ಹಾಕುತ್ತ ಕುಳಿತೆ. ಐದು ಹತ್ತು ನಿಮಿಷ ಹೋಗಿರಬೇಕು. ನನ್ನ ಕಿರಿಯ ಮಗು ಅನಿಲ, ಆಗಲೇ ಅಂಚೆಯವನು ಹಾಕಿಹೋದ ಅಂದಿನ ಟಪಾಲು ತಂದುಕೊಟ್ಟ. ಟಪಾಲು ಬಂತೆಂದರೆ ಸರಿ. ಇಂದಿರೆಗೆ ಎಲ್ಲಿಲ್ಲದ ಉತ್ಸಾಹ. ಅವಳೂ ಧಾವಿಸಿ ಬಂದಳು. ಒಂದೆರಡು ಕಾರ್ಡು, ಎರಡು ಮೂರು ಪಾಕೀಟು. ನಾನು ಪಾಕೀಟು ಹರಿದು ಓದತೊಡಗಿದೆ. ಅವಳು ಕಾರ್ಡಿನ ಪಠನ ನಡೆಸಿದಳು. ಒಂದು ಮುಗಿಸಿ ಇನ್ನೊಂದನ್ನು ಓದುತ್ತಿದ್ದಂತೆ "ನೋಡ್ರಿ. ಮಾಮಂಜೀಯವರ ಪತ್ರ"— ಅವಳ ಮುಖ ಇಷ್ಟಾಗಿತ್ತು. ಶ್ರೀಕಾರ—ಕ್ಷೇಮವಿಲ್ಲದ ಆ ಬೋಳು ಕಾಗದದಲ್ಲಿ ನಾಲ್ಕೇ ನಾಲ್ಕು ಸಾಲು. "ಸೌ........................ ನಿನ್ನ ಮಲತಾಯಿ ಮೊನ್ನೆ ತೀರಿಕೊಂಡಳು. ಶ್ರೀಹರಿಯ ಇಚ್ಛೆಗೆ ಉಪಾಯವಿಲ್ಲ. ಚಿ॥ ಸೌ. ಕಮಲೆಗೂ ಸುದ್ದಿ ತಿಳಿಸು."

ಮಲತಾಯಿ ತೀರಿಕೊಂಡಳು! ಎಲ್ಲಿದ್ದಳೋ, ಹೇಗಿದ್ದಳೋ ಎನ್ನುವದು ಉಳಿದವರಿಗೆಷ್ಟೂ ಅರಿಯದ ವಿಷಯ. ಅವರು ಇನ್ನೂ ಜೀವಂತರಿದ್ದ ಬಗ್ಗೆಯೇ ಕೇಳಿ ಗೊತ್ತು ಎಲ್ಲರಿಗೂ. ಸಾವಿನ ಸುದ್ದಿ ಆಕಸ್ಮಿಕವಾಗಿ ಎರಗಿದ್ದ ಕಾರಣ ಆ ಶಬ್ದ ಕೇಳಿಯೇ ಇಂದಿರೆ ಗಾಬರಿಯಾಗಿರಬೇಕು. ಆ ನಾಲ್ಕು ಸಾಲಿನಲ್ಲಿ ೨೫-೩೦ ವರುಷ ಅಖಂಡ ಹಿಂಸೆ—ಅಪಮಾನ ಅಪಕೀರ್ತಿ ಸಹನೆ-ತಾಳ್ಮೆ ಎಲ್ಲವನ್ನೂ ಅನುಭೋಗಿಸಿ, ಕೊನೆಗೂ ಆ ತಪಸ್ಸಿಗೆ ಫಲ ದೊರಕದೆ ಜೀವ ನೀಗಿದ ಒಬ್ಬ ಅಭಾಗ್ಯಳ ಕತೆ ಅಡಕವಾಗಿರಬಹುದೆಂಬ

ಕಲ್ಪನೆ ಇಂದಿರೆಗೆ ಆ ಕ್ಷಣವಲ್ಲಿ ಬರುವ ಸಂಭವವಿರಲಿಲ್ಲ. "ಇಂದೂ, ನೀರ ಹಾಕ್ಕೋಬೇಕು. ನೆರೆಮನ್ಯಾಗ ಯಾರಾರೇ ಇದ್ರ ಕರೀ. ನೀ ಮೊದಲ ಮೈತೊಳಕೊಂಡು ಮುಗಸು. ಹುಡಗೂರ್‍ಗೆ—ನನಗ ಆಮ್ಯಾಲ ಹಾಕೀಯಂತ ಊಟಾ ಉಡಿಗಿ ಮುಗದಮ್ಯಾಲ ಈ ಸುದ್ದಿ ತಿಳೀತು. ಪ್ರಾಣಿ ಇರೂ ತನಕಾನೂ ಯಾರಿಗೆ ಭಾರ ಆಗಲಿಲ್ಲ. ಸತ್ತಮ್ಯಾಲೂ ಅಷ್ಟನs. ಅಂತೂ ಈ ನರಕದಾಗಿಂದ ಒಮ್ಮೆ ಮುಕ್ತ ಆದ್ಲೂ. ಕಮಲಾನ ಮನೀಗೆ ಆಮ್ಯಾಲ ಹೋಗತೀನಿ. ಆಕೀಗೆ ಬರೇ ನೀರ ಶುದ್ಧಿ."

ನಾನು ಆ ಕಾರ್ಡನ್ನು ಕೈಯಲ್ಲಿ ಹಿಡಿದುಕೊಂಡು ನನ್ನ ಕೋಣೆಗೆ ಹೋಗಿ ಕುರ್ಚಿಯನ್ನಾ ಸರಿಸಿ—ಕಾರ್ಡಿನಲ್ಲಿಯ ಅದೇ ಆ ನಾಲ್ಕು ಸಾಲನ್ನು ಮತ್ತೆ ಮತ್ತೆ ಓದತೊಡಗಿದೆ. ಆ ಶಬ್ದವೀಥಿಯಿಂದ—ಅಖಂಡ ಚಿತ್ರಮಾಲೆ ಮಾಲೆ ಮಾಲೆಯಾಗಿ ಕಂಣೆದುರು ಹಾಯ್ದು ಹೋಗತೊಡಗಿತು. ನನ್ನ ಮಲತಾಯಿಯ ಪರಿತ್ಯಕ್ತ ಜೀವನದ ದಾರುಣ ಕತೆ ನೆನಪಿನ ಗೋರಿ ಯಿಂದೆದ್ದು ಕಂಣೆದುರು ಕಟ್ಟಿತು. ಇಪ್ಪತ್ತು ಇಪ್ಪತ್ತೈದು ವರುಷದ ಹಿಂದೆ ನಾನು ಪ್ರತ್ಯಕ್ಷ ಸಾಕ್ಷೀಭೂತನಾಗಿ—ನೋಡಿ ಅನುಭವಿಸಿದ ಒಂದು ಹೃದಯವಿದ್ರಾವಕ ಪ್ರಸಂಗ ಮತ್ತೆ ಮರುಕಳಿಸಿ ಬಂದಿತು. ಆ ತಂದ್ರಿಯಲ್ಲಿ ಮೈಮರೆತು ಅದನ್ನೇ ನೆನಿಸತೊಡಗಿದೆ.

ಇದೇ ಆ ಹೃದಯವಿದಾರಕ ಚಿತ್ರ:—

ಶಾಲೆಬಿಟ್ಟು ನಾನು ಮನೆಗೆ ಬಂದಾಗ ಸಂಜೆಯ ಸುಮಾರು ೫||-೬ ಗಂಟೆಯಾಗಿರಬೇಕು. ಪುಸ್ತಕದ ಚೀಲವನ್ನು ನನ್ನ ಕಪಾಟಿನಲ್ಲಿರಿಸಿ ಇನ್ನೇನು ಒಳಗೆ ಹೋಗಬೇಕೆನ್ನುವವ. ಅಷ್ಟರಲ್ಲಿಯೇ ಪಡಸಾಲೆಯ ಒಂದು ಬದಿಯ ಮೂಲೆಯಲ್ಲಿ ಕುಳಿತು ವೃತ್ತ ಪತ್ರಿಕೆಗಳನ್ನು ಓದುವ ಇಬ್ಬರು ಅಪರಿಚಿತ ವ್ಯಕ್ತಿಗಳನ್ನು ಕಂಡೆ. ನಿತ್ಯ ಮನೆಗೆ ಬರುತ್ತಿದ್ದ ಪಕ್ಷಕಾರರ ಪರಿ ಚಯ ನನಗೆ ಚೆನ್ನಾಗಿತ್ತು. ಆದರೆ ಈ ವ್ಯಕ್ತಿಗಳು ಪಕ್ಷಕಾರರಂತೆ ಕಾಣ ಲಿಲ್ಲ. ಇದ್ದರೂ ತೀರ ಹಳೆಯ ಖಟ್ಲೆಗಳ ಅಂಟುರೋಗದ ಗಿರಾಕಿ ಇರ ಬೇಕೆನ್ನಿಸಿತು. ಮನೆಗೆ ದಯಮಾಡಿಸಿದ ಅತಿಥಿಗಳಂತೆ—ಒಂದೆರಡು ದಿನದ ಮುಕ್ಕಾಮಿನ ಬೇಜವಿ ಮಾಡಿಕೊಂಡು ಬಂದವರಂತೆ—ಅವರು ಅಂಗಿ ಕೋಟು ಬಿಚ್ಚಿ ಅಲ್ಲೇ ಗೂಟಕ್ಕಿರಿಸಿ, ಹಾಸಿಗೆ ಹೊದಿಕೆಯನ್ನು ಅಲ್ಲೇ ಬದಿ

ಗಿರಿಸಿ ಅದಕ್ಕೆ ಆತುಕೊಂಡು ಕುಳಿತು ಪತ್ರಿಕೆಗಳ ಪಠನ ನಡೆಸಿದ್ದರು. ಈಗ ಸಂ. ಕ. ದಲ್ಲಿ ಲುಪ್ತವಾಗಿದ್ದ—ಮೂರು ಕಾಸಿನ ವೀರ "ಕನ್ನಡಿಗ" ಪತ್ರಿಕೆಯ ಪ್ರಸಾರದ ಕಾಲವದು. ಅಲ್ಲೀ ಅತ್ತಿತ್ತ ಜಿಲ್ಲಾಪಿಲ್ಲೆಯಾಗಿ ಉಳಿದ ಪತ್ರಿಕೆಗಳೂ ಬಿದ್ದದ್ದವು. ಜೋಹಾರ ಹೊರಟು ನಿಂತ ಪೀತವಸನಧಾರಿ ಯಾದ ರಾಜಪೂತ್ನಿಯಂತೆ ಹಳದಿಯ ವೇಷ್ಟನದಲ್ಲಿ ರಾಜಿಸುತ್ತಿದ್ದ "ಕರ್ನಾಟಕ ವೈಭವ", "ಗಜಾಲಿಶ್ರೇಷ್ಠಾ ಯಾ ನಿಬಿಡತರ ಕಾಂತಾರ ಜಠರಿ" ಎಂಬ ಶೀರ್ಷಿಕೆಯನ್ನು ವಜ್ರಪಾದದಲ್ಲಿ ಮೆಟ್ಟಿ ಮುಗಿಲ ಮುಖವಾಗಿ ನಿಂತ ಜಾಗೃತ ಹರಿದ್ವಯಗಳನ್ನು ಎತ್ತಿಹಿಡಿದ ಡಾ। ಲೋ. ಮಾ. ಬಾ. ಗಂ. ಟಿಳಕರ "ಕೇಸರಿ", ರಾ. ಸಾ. ಫ. ಗು. ಹಲಕಟ್ಟಿಯವರ "ನವಕರ್ನಾಟಕ" ಎಲ್ಲವೂ ಅಲ್ಲಿ ಜಾತ್ರೆ ನೆರೆಸಿದಂತೆ ನೆರೆದಿದ್ದವು. ವಕೀಲರ ಮನೆಗೆ ಬರುವ ಪಕ್ಷಕಾರರ ರುಚಿ-ವೈಚಿತ್ರ್ಯಕ್ಕೆ—ವೈವಿಧ್ಯಕ್ಕೆ ಸರಿಯಾಗಿ ಈ ಪತ್ರಿಕಾಪ್ರಪಂಚದ ಚೈತ್ರಯಾತ್ರೆ ನಡೆದಿತ್ತು. ಸಂಜೆಯ ಸಮಯ ದಲ್ಲಿ ಪಕ್ಷಕಾರರ ಗಡಿಬಿಡಿ—ಗದ್ದಲು ಕಡಿಮೆ. ಹೀಗಾಗಿ ಈ ಅಪರಿಚಿತ ವ್ಯಕ್ತಿಗಳಿಗೆ ಸಮೀಚೀನ ವಾಚನದ ವಿಷ್ಟಾನ್ನ ದೊರಕಿದಂತಾಗಿತ್ತು.

ನನ್ನ ಅನಪೇಕ್ಷಿತ ಆಗಮನದಿಂದ ಆ ಅಪರಿಚಿತರ ವಾಚನ ಸಮಾಧಿಗೆ ಭಂಗ ಬಂದಿರಬೇಕು. ಅವರು ತಟ್ಟನೆ ಮುಖವೆತ್ತಿ, ನನ್ನ ಕಡೆಗೆ ನೋಡಿ, ಮತ್ತೆ ತಮ್ಮತಮ್ಮಲ್ಲಿ ಅಂತರಂಗ ಶೋಧವಮಾಡಿಕೊಂಡವರಂತೆ ನೋಡಿದರು. ಆವರ ಟಕಮಕ—ಪರಸ್ಪರ ನೇತ್ರಪಲ್ಲವಿಯಿಂದ, ನನಗೂ ವಿಚಿತ್ರ ವೆನಿಸಿತು. ನಾನು ಅಂಗಿಯನ್ನು ಕಳೆದಿಟ್ಟು, ಕೈಕಾಲು ಮುಖ ತೊಳೆದು ಕೊಳ್ಳಲೆಂದು ಬಚ್ಚಲು ಮನೆಗೆ ನಡೆದೆ. ಬಚ್ಚಲಿಗೆ ಹೋಗಬೇಕಾದರೆ—ನಡುಮನೆ—ಮತ್ತೆ ಊಟದ ವಿಶಾಲ ಮನೆ—ನಂತರ ಅಡುಗೆಯ ಮನೆ—ಎಲ್ಲವನ್ನೂ ಬಳಸಿಕೊಂಡು ಹೋಗಬೇಕು. ನಡುಮನೆಯಲ್ಲಿ ನನ್ನ ತಾಯಿ, ಅಡುಗೆಯ ಆಳು, ಅವರ ಜೊತೆಗೆ ಸುಮಸುಮಾರು ನನ್ನ ತಾಯಿಯ ವಯಸ್ಸಿನ—ಅಥವಾ ಅವರಿಗಿಂತ ೩-೪ ವರುಷಕ್ಕೆ ಹಿರಿಯಳಾದ ಇನ್ನೊಬ್ಬ ಹೆಂಣುಮಗಳು ಸೇರಿದ್ದಳು. ಅವರೆಲ್ಲರೂ ಮುಂದೆ ಹರವಿದ ಪಲ್ಯೆಯನ್ನು ಆರಿಸುವದರಲ್ಲಿ ತಲ್ಲೀನರಾಗಿದ್ದರು. ನಾನು ಬಂದ ಸುಳಿವರಿತು ಆ ಅಪರಿಚಿತ ಹೆಂಣುಮಗಳು ಮುಖವೆತ್ತಿ ನೋಡಿದಳು. ಅದನ್ನು ಕಂಡು ನನ್ನ

ತಾಯಿ “ಬಾಪ್ರೂ, ಕೈಕಾಲ ತೊಳಕೊಂಡೇನು? ಇವರಿಗೆ ನಮಸ್ಕಾರ ಮಾಡಪಾ” ಎಂದರು.

ಅವರು ಯಾರು? ನಾನು ಯಾಕೆ ನಮಸ್ಕಾರ ಮಾಡಬೇಕು? ಅವರ ನನ್ನ ಸಂಬಂಧವೇನು? ಯಾವುದೂ ಗೊತ್ತಾಗಲಿಲ್ಲ. ನನ್ನ ತಾಯಿಗೆ ಹತ್ತಿರದ ಬಳಗ, ಅಕ್ಕ-ತಂಗಿ-ಸಂಬಂಧಿಕರು ಯಾರೂ ಇದ್ದಿರಲಿಲ್ಲ. ತಾಯಿಯ ಅಪ್ಪಣೆಯಂತೆ, ಬಾಗಿ ಆ ಹೆಂಣುಮಗಳಿಗೆ ವಂದಿಸಿದೆ. ಅಡುಗೆಯ ಲಕ್ಷ್ಮಣಾಚಾರಿ ನಡುವೆಯೇ ಬಾಯಿ ಹಾಕಿ “ಇವರು ಬಾಪೂರಾಯರು-ಬಾಯೀಯವರ ಹಿರೇಮಕ್ಕಳು. ಸಾಲೀ ಕಲೀತಾರ” ಎಂದು ನನ್ನ ಪರಿಚಯವನ್ನು ಅವರಿಗೆ ಮಾಡಿಕೊಟ್ಟ. “ಉದಂಡ ಆಯುಷ್ಯವಂತನಾಗಪಾ, ಕೀರ್ತಿವಂತನಾಗು, ದೇವರು ನಿನ್ನ ಹೊಟ್ಟೀ ನೆತ್ತೀ ಥಂಣಗಿಟ್ಟಿರಲಿ, ಏನ ಕಲೀತೀಯಪಾ” ಆಶೀರ್ವದಿಸಿ ಅವರು ಕೇಳಿದರು.

“ಇಂಗ್ಲೀಷ ನಾಲ್ಕನೇ ಎತ್ತೀದಾಗ ಇದ್ದೀನ್ರಿ” ಅವರ ಆಶೀರ್ವಚನದಿಂದ, ಬಾಯಿತುಂಬ ಹರಕೆಯಿಂದ ಲಜ್ಜಿತನಾದ ನಾನು ಹೆಚ್ಚಿಗೆ ಮಾತನಾಡದೆ ತ್ರೋಟಕ ಉತ್ತರ ಕೊಟ್ಟೆ.

ಅದನ್ನರಿತೋ ಏನೋ—ತಾಯಿ ಹೇಳಿದರು: “ಬಾಪೂ ಕೈಕಾಲ ತೊಳಕೊಂಡಿದ್ರ ಪ್ರಾರ್ಥನಾ ಮುಗಸು. ಇಗಾ ನಾ ಈಗ ಬಂದೆ. ನಿನಗ ತಿಲ್ಲಿಕ್ಕೆ ಕೊಟ್ಟೀ ಬ್ಯಾರೇ ಕೆಲಸಕ್ಕ ಕೂಡತೀನಿ. ನಾನೀ—ಕಮೀನ್ನೂ ಕರಕೋ; ದೇವರ ಮುಂದ ದೀಪ ಅದನೋ ಇಲ್ಲೋ ನೋಡು.” ನಾನು ಬಚ್ಚಲಮನೆಗೆ ಇನ್ನೂ ತೆರಳುತ್ತಿರುವಾಗಲೇ ತಾಯಿ ಆ ಅಪರಿಚಿತ ಹೆಂಣುಮಗಳಿಗೆ ಹೇಳುತ್ತಿದ್ದಳು—“ಮುಂಜಾನೆ-ಸಂಜೀ ಪ್ರಾರ್ಥನಾ, ಸಂಧ್ಯಾವಂದನಾ ಇಲ್ಲದನಃ ಹುಡುಗೂರು ಬಾಯಾಗ ನೀರ ಹಾಕೂ ಹಾಂಗ ಇಲ್ಲಾ; ಅದು ಅವರ ಅಜ್ಜನ ಶಿಸ್ತು, ಅವರು ಊರಾಗ ಇರ್ಲಿ, ಬಿಡ್ಲಿ. ಒಮ್ಮೆ ಪಾಠ ಹಾಕಿಕೊಟ್ಟಾರ-ಗಾಡೀ ರೂಳ ಮ್ಯಾಲ ನಡಧಾಂಗ ಎಲ್ಲಾ ಸುರಳೀತ ಸಾಗಬೇಕು.”

“ಪುಣ್ಯವಂತರಿದ್ದೀರವಾ, ಎಲ್ಲಾ ಬೇಡಿ ಬರಬೇಕು. ಸುಖಾ—ವೈಭವಾ ಏನ ಬಾಗಿಣಾಗಿ ಬರತಾವಃ. ಹಿಂದಿನ ಜಲ್ಮದಾಗ ಮಾಡಿದ ಪುಣ್ಯಾ ಇದ್ರ, ಅವು ಇಂದ ತಾವಃ ಫಲಸ್ತಾವ. ಎಲ್ಲಾರಿಗೂ ಬಾ ಅಂದ್ರ, ಹ್ಯಾಂಗ ಬಂದೀತು? ಅದಕೂ ನಸೀಬ ಬೇಕಾಗತದ.” ಅವರು ಮರುನುಡಿದರು.

ಅಷ್ಟರಲ್ಲಿ ತಾಯಿಯೆದ್ದು ಬೇರೆ ಕೆಲಸಕ್ಕೆಂದು ಅಡುಗೆಯ ಮನೆಯ ಕಡೆಗೆ ನಡೆದರು. ನಾನು ಕೈ-ಕಾಲು-ಮೋರೆ ತೊಳೆದುಕೊಂಡು, ಮೂರು ಬೆರಳಳತೆಯ ಕಪ್ಪು ಧರಿಸಿ ಪ್ರಾರ್ಥನೆ-ಸಾಯಂಸಂಧ್ಯೆಗೆ ದೇವರ ಮನೆಗೆ ನಡೆದೆ.

ನನ್ನ ಸಂಧ್ಯಾವಂದನೆ ಮುಗಿಯುವ ಸುಮಾರಿಗೆ ಕಮೀ ನಾನೀ ಬಂದರು. ಮೂವರೂ ಜೊತೆಯಾಗಿ "ಗಣಾಧೀಶ ಜೋ ಈಶ"ದಿಂದ ಮೊದಲು ಮಾಡಿ "ಧ್ಯಾತ್ವಾ ನೀಲೋತ್ಪಲಶ್ಯಾಮಂ ರಾಮಂ ರಾಜೀವ ಲೋಚನಂ"ದವರೆಗೆ ತಿಳಿದೋ ತಿಳಿಯದೆಯೋ ಸಾಯಂ ಪ್ರಾರ್ಥನೆ ಮುಗಿಸಿ ಅಜ್ಜನ ಶಿಸ್ತಿನ ಕುತ್ತಿನಿಂದ ಪಾರಾದೆವು. ಅಷ್ಟು ಹೊತ್ತಿಗೆ ನನ್ನ ತಾಯಿ ಮೂವರಿಗೂ ಬೇರೆ ಬೇರೆ ಬಟ್ಟಲಲ್ಲಿ ತಿನಿಸಿರಿಸಿ ದಾರಿಕಾಯುತ್ತ ಕುಳಿತಿದ್ದರು. ಅವರ ಸುತ್ತು ನೆರೆದು ನಾವು ನಮ್ಮ ನಮ್ಮ ಪಾಲಿನ ಬಟ್ಟಲನ್ನು ತೆಗೆದುಕೊಂಡು ತಿನ್ನಲು ಮೊದಲು ಮಾಡಿದೆವು. ನನಗೆ ತಿನಿಸಿನ ಮೇಲೆ ಅಷ್ಟು ಲಕ್ಷ್ಯವಿರಲಿಲ್ಲ. ಆ ಹೊಸದಾಗಿ ಬಂದ ಹೆಂಣುಮಗಳ ಬಗ್ಗೆ ಕುತೂಹಲ. ಅವರ ನಮ್ಮ ಸಂಬಂಧ—ಅವರ ಆಕಸ್ಮಿಕ ಆಗಮನದ ಬಗ್ಗೆ ಆಶ್ಚರ್ಯಪಡಿಸುತ್ತಿತ್ತು. ಅವರು ಬಂದ ಕಾರಣ—ಅವರ ಗೊತ್ತು ಗುರಿಯನ್ನು ಅರಿಯಬೇಕೆಂದು, ತಾಯಿಯನ್ನು ಇನ್ನೇನು ನಾನು ಕೇಳುವವ, ಅಷ್ಟರಲ್ಲಿ, ನನ್ನ ತಂಗಿ ಕಮ್ಮಿ-ಕಮಲಾ ನಡುವೆಯೇ ಬಾಯಿಹಾಕಿ "ಬಾಪೂ, ಅವರು ಹೊರಗ ಬಂದಾರಲಾ— ನೋಡಿದೇನು? ಅವರೂ ಅವ್ವಕ ಅಂತ! ಏನ ಛಲೋ ಇದ್ದಾರಪಾ. ನನ್ನಂತೂ ತೊಡೀಮ್ಯಾಲ ಕೂಡಿಸಿ ಕೊಂಡು ಸಂಣ ಹುಡುಗೂರಿಗೆ ಕೊಡತಾರಲಾ-ಹಾಂಗ ಲಟಲಟ ಮುದ್ದು ಕೊಟ್ರು. ಸುಡ್ಲಿ—ನಾಚಿಕಿ ಸಾವ್ಕ ಬಂತಪಾ."

"ಕಮೀ, ನಿನಗೆಷ್ಟು ಕಾರಭಾರಾ. ಹಾಂಗ ನಡನಡವ್ಕ ಮಾತಾಡಬಾರದು. ನೀವ್ ಯಾರು? ಈಗ್ಯಾಕ ಬಂದ್ರೀ ಅಂತ್ಕ ಕೇಳಬಾರದು. ಏನು? ನಾನೀ ನೋಡು—ಏನಾರೆ ಅಡ್ಡಾತಿಡ್ಡಾ ಮಾತಾಡಿದನೇನು?'

"ನಾನೀ ಏನು? ಮಬ್ಬೀನ ಹಡೀ. ಮಂದೀ ಮುಂದ ಬಾಯಿಬಿಟ್ಟರ ಆಣಿ. ಖಣಾ ಖಣಾ ನಾಕ ಮಾತಾಡಿದರೇನ ಅಗ್ತದ? ಅವರೆಷ್ಟು ರಮಿಸಿ ಕೇಳ್ತಿದ್ರು ಬಸವಂಣನ ಹಾಂಗ ಹಾಂಗೇ ಕೂತಬಿಟ್ಟಾ."

" ಬೋಳಕಾಣೀ, ಸುಮ್ನಿರು ಕೂಡು! ನಿನಗೆಲ್ಲಾ ಅವರದೇ ಅಚ್ಛ್ಯಾ. ಹಿರ‍್ಯಾರು, ಕಿರ‍್ಯಾರು-ಹೊರಗಿನವರು-ಯಾರದೂ ದರಜಾ ಇಲ್ಲಾ ನಿನಗ. ಜಾಸ್ತೀ ಮಾತಾಡಬಾರದೂ ಅಂದ್ರ, ನಾನೀನಾ ಮುಖೀನ ಅಂತ ಹೇಳ್ತಾಳ. ಆತಿಲ್ಲೊ ತಿನೂದು? ಆಡ್ಲಿಕ್ಕೆ ಹೋಗ್ರಿನ್ನ, ಊಟದ ಹೊತ್ತಿನ ತನಕಾ. ಇಲ್ಲದಿದ್ದರ ಪೀರ‍್ಯಾ ಹಾಸಿಗಿ ಹಾಸತಿರಬೇಕು, ಮಾಡೀಮ್ಯಾಲ. ಅಲ್ಲಿ ಆಡ ಕೋತಿರ‍್ರಿ."

ಕವ್ಯಾ-ನಾನೀ ನೀರು ಕುಡಿದು ಆಡಲೆಂದು ಹೋದನಂತರ ತಾಯಿ ನನಗೆ ಹೇಳಿದರು—" ಬಾಪೂ, ಅವರು ಬಂದಾರಲಾ ಹೊರಗ—ಅವರು ನಿನ್ನ ಮಲತಾಯಿ. ಪಡಸಾಲ್ಯಾಗ ಕೂತಾವ್ರು, ನಿಮ್ಮ ಅಜ್ಜಾ-ಮಾನಾ; ಅಂದರ ಇವರ ಮಾವನವರು-ಬೀಗರು."

" ಅಂದ್ರಿs ಹೊರಗ ಕೂತ ಹೆಣ್ಮಗಳು ನಿನ್ನ ಸವತೀ ಏನು?"

"ಏನ ಘಾಜಲ ಇದ್ದಿಯೋ? ಆ ಶಬ್ದ ನಾ ಅನಬಾರದೂ ಅಂದ್ರೂ ನೀ ಅಂದೇಬಿಟ್ಟಿ. ಏನ ಸಂವತ್ಯೋ ಏನ ಮುಂಡೋ! ಒಬ್ಬಾಕಿ ಸಂವತಿ ಇದ್ದಾಳಂತ ನನಗೂ ಗೊತ್ತಿತ್ತು. ಪ್ರಾಣಿ ಇಂಥಾ ಸುರೂಪಿ, ಒಳ್ಳ್ಯಾಕಿ ಇದ್ದಾಳಂತ ಕನಸಮನಸಿನ್ಯಾಗೂ ಇರಲಿಲ್ಲ. ಅವರಿಗೇನ ಕಾಡೂ ಕಾಟ ಇತ್ತೋ ಯಾರ ಬಲ್ಲರು? ವಿಧಿ, ಅವರ ಸುಖಾ ಕಸಗೊಂಡ ಬಿಟ್ಟಾ."

" ಅಂದರ ಏನಾಗೇದ ಅವರಿಗೆ ಈಗ? ನಮ್ಮನ್ಯಾಗ ಯಾಕ ಇರೂದಿಲ್ಲಾ? ಈಗs ಯಾಕ ಬಂದಾರ?"

"ಇವರು ಮನ್ಯಾಗ ಇಟಗೋತಾರೇನೋ ಅಂತ ಕೇಳ್ಳಿಕ್ಕೆ ಬಂದಾರ. ಇಟಗೊಂಬೂದಂತೂ ಧೂರs ಉಳೀತು. ಎಲ್ಲೆ ನಿಂತ ಕಾಲಮ್ಯಾಲs ಹೊರಗ ಹಾಕತಾರೋ ಅಂತ ಅಂಜಿಕಿ ಹತ್ತೇದ. ಅವರು ಮನೀಗೆ ಬಂದ ಮ್ಯಾಲ ರಣಕತ್ಲs ಆಗತದ. ನಾವು ಹೇಳಿದ್ರೇನು ಕೇಳೂ ಹಾಂಗ ಇದ್ದಾರs. ಅಜ್ಜಿ ಆರೆ ಇದ್ರು ನಾಕ ಸಮಾಧಾನದ ಮಾತ ಹೇಳತಿದ್ಲು. ಅವರು ಕಚೇರಿಯಿಂದ ಬರೂದ್ರೊಳಗ ನೀ ಹೋಗಿ ಶ್ಯಾಮರಾಯರನ್ನ ಕರಕೊಂಡು ಬಾ. ಅವರೇ ಒಂದಿಷ್ಟು ಸಮಾಧಾನ ಹೇಳಿ ಬಗೀಹರಸ್ತಾರ. ಲಕ್ಷ್ಮಣಾಚಾರಿ ಅಡಿಗ್ಗೆ ಕೂಡ್ಲಿ. ಅವನ್ನ ಕಳಿಸಿದರ ಇಂದs ತಿರುಗಿ ಬಂದಾನಂಬೂದು ಏನ ನೇಮದ್ದಲ್ಲಾ."

ವಕೀಲ ಶ್ಯಾಮರಾಯರು ನನ್ನ ತಂದೆಯ ಪರಮಸ್ನೇಹಿತರು. ಅವರ ಮಾತನ್ನು ತಂದೆಯವರು ಮೀರುತ್ತಿರಲಿಲ್ಲ. ಅಲ್ಲದೆ ಅವರ ಮತ್ತು ನಮ್ಮ ಕುಟುಂಬದ ಪೂರ್ವ ಪರಿಚಯ—ಋಣಾನುಬಂಧ ತೀರ ಹಳೆಯದು. ನಾನು ಓಡುತ್ತ ಹೋಗಿ ಅವರನ್ನು ಕರೆದುಕೊಂಡು ಬಂದೆ. ನನ್ನ ತಾಯಿಯನ್ನು ಅವರು ತಂಗಿಯಂತೆ ಕಾಣುತ್ತಿದ್ದರು. ಅಂಣ-ತಮ್ಮನಿಲ್ಲದ ನನ್ನ ತಾಯಿಗೆ ಅವರೇ ಅಂಣ-ತಮ್ಮನಂತಿದ್ದರು. ಅವರು ಬಂದನಂತರ ತಾಯಿ, ಮನೆಯಲ್ಲಿ ಬಂದಿಳಿದ ಆ ತ್ರಿಮೂರ್ತಿಗಳ ಬಗ್ಗೆ ತಿಳಿಸಿ, ಮುಂದೆ ಸಂಭವಿಸ ಬಹುದಾದ ಪ್ರಕಾಂಡ ತಪ್ಪಿಸುವ ಬಗ್ಗೆ ಯಾಚಿಸಿರಬೇಕು. ಶ್ಯಾಮರಾಯರು ಹೊರ ಅಂಗಣದಲ್ಲಿಯೇ ಸುತ್ತಾಡುತ್ತಿದ್ದರು. ತಂದೆ ಬರುವದನ್ನು ದೂರ ದಿಂದಲೇ ಕಂಡು, ಅವರನ್ನು ಕರೆದುಕೊಂಡು ತಮ್ಮ ಮನೆಯ ಕಡೆಗೇ ಹೋಗಿ ಬಿಟ್ಟರು ಸದ್ಯದ ಪೀಡೆ ತೊಲಗಿತೆಂದು ಭಾವಿಸಿ ತಾಯಿ ಒಳಗೆ ಕೆಲಸಕ್ಕೆ ಹೋದರು. ನಾನು ಅಲ್ಲೇ ಓದುತ್ತ ಕುಳಿತೆ.

ತಂದೆಯವರು ತಿರುಗಿ ಮನೆಗೆ ಬಂದಾಗ ರಾತ್ರಿಯ ೯||-೧೦ ಗಂಟೆಯಾಗಿರಬೇಕು. ಶ್ಯಾಮರಾಯರ ಮನೆಯಲ್ಲಿಯೇ ತಮ್ಮ ಊಟ ಮುಗಿಯುತ್ತಿದೆ, ಯಾರೂ ತಮಗಾಗಿ ಕಾಯಕೂಡದೆಂದು ಹೇಳಿಕಳಿಸಿದ್ದರಿಂದ ನಮ್ಮದೆಲ್ಲ ಊಟ ಮುಗಿದುಹೋಗಿತ್ತು. ಬಂದ ಅತಿಥಿಗಳು ಹೊರಗೆ ಪಡಸಾಲೆಯಲ್ಲಿ ಮಲಗಿಬಿಟ್ಟಿದ್ದರು. ಒಳಗೆ ತಾಯಿ, ನನ್ನ ಮಲತಾಯಿ ಊಟ ಮುಗಿಸಿ ಎಲೆ-ಅಡಿಕೆ ಹಾಕಿಕೊಳ್ಳುತ್ತಿದ್ದರು. ನಾನು ನಡುಮನೆಯಲ್ಲಿ ಓದುತ್ತ ಕುಳಿತಿದ್ದೆ. ತಂದೆ ಬಂದವರು ನೇರವಾಗಿ ಅಟ್ಟದ ಮೇಲಿನ ತಮ್ಮ ಕೋಣೆಗೆ ಹೋದರು. ಅವರು ಬಂದ ವರದಿಯನ್ನು ತಾಯಿಗೆ ಮುಟ್ಟಿಸಿದೆ. ತಾಯಿಗೆ ಡವಡವ. ತಂದೆಯವರು ಬಂದವರೇ ಒಳಗೆ ಕೂಡ ಹಣಿಕಿಕ್ಕದೆ ಮೇಲೆ ಹೋಗಿಬಿಟ್ಟಿದ್ದರಿಂದ ಶ್ಯಾಮರಾಯರ ಸಂಧಾನ ಫಲಿಸಿರಬೇಕೆಂದು ಅನುಮಾನವಾದರೂ ಅವಳಿಗೆ ಭಯವೇನೂ ತಪ್ಪಿದಂತೆ ಕಾಣಲಿಲ್ಲ. ಅವರು ಕುಳಿತಲ್ಲಿಂದಲೇ ನನಗೆ ಹೇಳಿದರು: “ ಬಾಪೂ, ಲಕ್ಷ್ಮಣಾಚಾರಿಗೆ ಹೇಳು, ಮ್ಯಾಲ ನೀರಿನ ತಂಬಿಗೀ ಇಟ್ಟ ಬಾ ಅಂತ. ಇವತ್ತಿನ ಪೇಪರ್ನೂ ಒಯ್ಯ ಅಂತ ಹೇಳು. ಹತ್ತು ಹೊಡೀತು. ಇನ್ನು ಮಲಕೊಂಡ ಬಿಡು. ನಾಳೆ ಶನಿವಾರ, ಮುಂಜಾನೀ ಸಾಲಿ, ಲಗೂನ ಏಳಬೇಕು.” ಬೇಗನೇಳುವದರ ಬಗ್ಗೆ

ನನಗೆ ಎಚ್ಚರಿಕೆ ಕೊಡುವ ಕಾರಣವಿರಲಿಲ್ಲ. ದಿನಂಪ್ರತಿ ನಾನು ಐದು ಗಂಟೆಗೇ ಏಳುತ್ತಿದ್ದೆ. ಆದರೆ ಏನೋ ಮಾತಾಡಬೇಕೆಂಬ ಕಾರಣದಿಂದ ತಾಯಿ ಅಷ್ಟು ನುಡಿದರು. ಪ್ರತ್ಯುತ್ತರದ ಅಪೇಕ್ಷೆ ಇಲ್ಲದೆ ಆಡಿದ ಮಾತು ಅವು. ಲಕ್ಷ್ಮಣಾಚಾರಿಗೆ ನಿರೋಪ ಮುಟ್ಟಿಸಿ, ನಾನು ಅಲ್ಲೇ ಹಾಸಿದ ಹಾಸಿಗೆಯ ಮೇಲೆ ಅಡ್ಡಾದೆ. ನನ್ನಿಂದ ಅನತಿ ದೂರದಲ್ಲಿ ತಾಯಿ, ಅವರಾಚೆಗೆ ನನ್ನ ಮಲತಾಯಿ ಮಲಗಿದರು. ಅವರಿನ್ನೂ ಮಾತನಾಡುತ್ತಿರಬೇಕು. ನನ್ನ ಕಂಣಿಗೆ ನಿದ್ದೆಯ ಅಮಲೇರಿದಂತಾಗಿತ್ತು. ಕಂಣು ಭಾರವಾಗಿ ಮುಚ್ಚತೊಡಗಿದವು. ನನಗೆ ಸಂಪೂರ್ಣವಾಗಿ ನಿದ್ರೆಯು ಮುಸುಕು ಯಾವಾಗ ಮುಚ್ಚಿತೋ ಅರಿಯೆ!

ಎಂದೂ ಎಚ್ಚರಾಗದ ನನಗೆ ಅಂದು ಅಪರಾತ್ರಿಯಲ್ಲಿಯೇ ಜಾಗರ ಬಂದಿತು. ನಿದ್ದೆ ಪೂರ್ಣವಾಗಿ ಹಾರಿತ್ತು. ಕಂಣು ನಿಚ್ಚಳವಾಗಿ ತೆರೆದವು. ಈ ಮಗ್ಗುಲಿನಿಂದ ಆ ಮಗ್ಗುಲಿಗಾದೆ. ಮುಸುಕೆಳೆದುಕೊಂಡೆ. ಕೈ ಬಿಟ್ಟು ದೂರ ಸರಿಯುತ್ತ ನಡೆದ ನಿದ್ರೆಯನ್ನು ರಮಿಸಿದರೂ, ಒತ್ತಾಯದಿಂದ ಹತ್ತಿರ ಕರೆದರೂ ಹಟಮಾರಿಯಂತೆ ಬಳಿಗೆ ಬಾರದೆ ಸೆಟೆದುಕೊಂಡು ದೂರ ಸರಿದು ಹೋದ ಕಾರಣ ಗತ್ಯಂತರವಿಲ್ಲದೆ ಹಾಸಿಗೆಯ ಮೇಲೆ ಎದ್ದು ಕುಳಿತೆ.

ಕಮೀ, ನಾನೀ, ತಾಯಿ ಸುಖವಾಗಿ ಮಲಗಿ, ಗೊರಕೆ ಹೊಡೆಯುತ್ತಿದ್ದರು. ಚತುರ್ದಶಿಯ ಪೂರ್ಣ ಚಂದ್ರನ ಬೆಳಕು ಕಿಟಕಿಯಿಂದ ತೂರಿ ಬಂದು ಅವರ ಮುಖವನ್ನು ಬೆಳಗುತ್ತಿತ್ತು. ಆದರೆ ಆಚೆಗೆ ಮಲಗಿದ ನನ್ನ ಮಲತಾಯಿಯ ಹಾಸಿಗೆ ಮಾತ್ರ ಬರಿದಾಗಿದ್ದಂತೆ ಕಂಡಿತು. ಹೊತ್ತುಕೊಳ್ಳಲೆಂದಿಟ್ಟ ರಗ್ಗು-ಚಾದರು ಮಡಿಚಿಟ್ಟಂತೆ-ಮಡಿಕೆಮುರಿಯದೆ ಓರಣವಾಗಿ ಹಾಗೇ ಇತ್ತು. ಹಾಸಿಗೆಯ ತಿದ್ದಿ ತೀಡಿದ ಓರಣ ಮಾಸದಂತಿತ್ತು. ನನಗೆ ಆಶ್ಚರ್ಯ-ಭಯ ಏಕಕಾಲದಲ್ಲಿ ತುಡುಕಿದವು. ನಾನು ಮಲಗುವಾಗ ನೋಡಿದ್ದೆ—ಅವರು, ತಾಯಿ ಇಬ್ಬರೂ ಹಾಸಿಗೆಯ ಮೇಲೆ ಮಾತನಾಡುತ್ತ ಕುಳಿತಿದ್ದವರು ಹಾಗೇ ಒರಗಿಕೊಂಡದ್ದನ್ನು. ಈಗ ಮಲತಾಯಿ ಆಕಸ್ಮಿಕವಾಗಿ ಹೇಗೆ ಮರೆಯಾಗಿದ್ದರೋ ಹೊಳೆಯದಾಯಿತು. ಇಲ್ಲಿ-ಅಲ್ಲಿ-ಎಲ್ಲಿಯೂ ಅವರ ಸುಳಿವು ಕಂಡುಬರಲಿಲ್ಲ. ಪಡಸಾಲೆಗೆ-ಅಡುಗೆಯ ಮನೆಗೆ ಹೋಗುವ ಬಾಗಿಲು ಹಾಕಿದ್ದು ಹಾಕಿದಂತೇ ಇದ್ದವು. ಆದರೆ ಅಟ್ಟಕ್ಕೆ ಹೋಗುವ

ನಡುಮನೆಯಲ್ಲಿಯ ಬಾಗಿಲು ಮಾತ್ರ–ಮುಂಚೆ ಮುಂಪೆ ಮಾಡಿತ್ತೋ ಇಲ್ಲವೋ ಅರಿಯೆ. ಅದು ಮಾತ್ರ ತೆರೆದಿತ್ತು. ಅಟ್ಟದ ಮೇಲೆ ತಂದೆಯವರ ಕೋಣೆಯಿಂದ ದೀಪದ ಬೆಳಕು ತೂರಿಬಂದು ಜಿನ್ನೆಯಲ್ಲಿ ಅಸ್ಪಷ್ಟವಾಗಿ ಮಸಗುತ್ತಿತ್ತು. ಇಂಥ ಅಪರಾತ್ರಿಯಲ್ಲಿ, ತಂದೆಯವರ ಕೋಣೆಯಲ್ಲಿ ಎಂದೂ ದೀಪವಿದ್ದುದನ್ನು ನಾನು ಕಂಡಿರಲಿಲ್ಲ. ಅವರದು ತಪ್ಪದೆ ರಾತ್ರಿಯ ಹನ್ನೊಂದಕ್ಕೆ ಮಲಗಿ, ಬೆಳಗಿನ ಜಾವದಲ್ಲಿ ನಾಲ್ಕು–ನಾಲ್ಕೂವರೆ ಘಂಟೆಗೇ ಏಳುವ ಪರಿಪಾಠ. ಅದಕ್ಕೆ ಬಂದ ಚ್ಯುತಿಯಿಂದ ನನ್ನ ಆಶ್ಚರ್ಯ ದ್ವಿಗುಣಿಸಿತು. ಸರಿ ರಾತ್ರಿಯಲ್ಲಿ ಎದ್ದು, ಮೇಲೆ ಹೋಗಿ ನೋಡಿ ಬರುವ ಎದೆಯಾಗಲೊಲ್ಲದು. ಹಾಗೇ ಹಾಸಿಗೆಯ ಮೇಲೆ ಎದ್ದು ಕುಳಿತುಕೊಂಡೆ. ಮೇಲಿನಿಂದ ಯಾರೋ ಮಾತನಾಡುವ ದನಿ, ಗಾಳಿಯಲ್ಲಿ ತೇಲಿಬರುವ ಆ ಮಾತಿನ ಅಸ್ಪಷ್ಟ ರೀತಿ ನೋಡಿವರೆ ಅದು ನನ್ನ ತಂದೆಯವರ ದನಿ ಎನ್ನುವದರಲ್ಲಿ ಸಂಶಯವೇ ಉಳಿಯಲಿಲ್ಲ. ಇಂಥ ಅಪರಾತ್ರಿಯಲ್ಲಿ ಅವರು ಯಾರ ಕೂಡ ಮಾತಾಡುತ್ತಿರಬೇಕು? ಪಕ್ಷಕಾರರನ್ನು ಕಟೆದು ಕಟೆದು ಮೂರ್ತಿ ಮಾಡುವ ವೇಳೆಯೂ ಇದಲ್ಲ. ಧೈರ್ಯ ತಂದುಕೊಂಡು ಕಳ್ಳ ಹೆಜ್ಜೆಯಿಂದ ಒಂದೊಂದಾಗಿ ಪಾವಟಿಗೆಗಳನ್ನು ಹತ್ತಿ ,ಮೇಲೆ ಹೋದೆ. ಉಸುರಾಡಿಸಿದರೂ ಸದ್ದಾಗುವಷ್ಟು ನೀರವತೆ ಪಸರಿಸಿತ್ತು. ತಂದೆಯವರು ತಮ್ಮ ಮಲಗುವ ಕೋಣೆಯಲ್ಲಿದ್ದ ಆರಾಮು ಖುರ್ಚಿಯ ಮೇಲೆ ನೀಟಾಗಿ ಕುಳಿತಿದ್ದರು. ಖುರ್ಚಿಯ ಮುಂದಿನ ಟೀಪಾಯಿಯ ಮೇಲೆ ನೀರಿನ ತಂಬಿಗೆ ಇತ್ತು. ನನ್ನ ಮಲತಾಯಿ:–ಬಾಗಿಲಿಗೆ ಬೆನ್ನು ಮಾಡಿಕೊಂಡು ತಂದೆಯವರ ಪಲ್ಲಂಗದ ಒಂದು ಬದಿಯನ್ನು ಆಶ್ರಯಿಸಿ ನಿಂತುಕೊಂಡಿದ್ದರು. ಸೀರೆಯ ಸೆರಗಿನಿಂದ ಕಂಣೊರಸಿಕೊಳ್ಳುವದು ಕಾಣುತ್ತಿತ್ತು. ಕೋಣೆಯ ಒಂದು ಬಾಗಿಲ ಫಡಕು ಮುಂದಾಗಿತ್ತು. ಆ ಫಡಕಿನಲ್ಲಿ ಬಿಟ್ಟ ಬಿರುಕಿನಿಂದ ಒಳಗೆ ನಡೆದ ಸರ್ವ ಚಲನವಲನವೂ ಕಾಣುತ್ತಿತ್ತು. ಆದರೆ ನಾನು ಮರೆಗೆ ನಿಂತುದರ ಸುಳಿವು ಒಳಗಿನವರಿಗೆ ಹತ್ತದಂತಿತ್ತು.

ಕೋಣೆಯಲ್ಲಿಯ ಮಾತು ಈಗ ಮಾತ್ರ ಸಂಪೂರ್ಣವಾಗಿ ನಿಂತಿತ್ತು.

ನನ್ನ ಮಲತಾಯಿ ನಿಂತುಕೊಂಡಿದ್ದವರು ಚಟ್ಟನೆ ಮುಂದೆ ಬಾಗಿ, ತಂದೆಯವರ ಎರಡೂ ಕಾಲುಗಳನ್ನು ಹಿಡಿದುಕೊಂಡು, ಬಿಕ್ಕಿಬಿಕ್ಕಿ ಅಳುತ್ತ

ಹೇಳಿದರು: "ಈ ಮನ್ಯಾಗ ನನ್ನ ಕಸಾ-ಮುಸರೀಯಾಕಿ ಹಾಂಗ ಇಡ್ರಿ. ಅರಹೊಟ್ಟಿ ಕೂಳಹಾಕ್ರಿ. ಎಂಜಲಾ ಹಳಗಲಾ ತಿಂವ ಬದಕತೀನಿ. ಆದರ ಇಲ್ಲೇ ಇಟಗೊಂಡು ನನ್ನ ಮಾನಾ ಕಾಯಿರಿ. ಗಂಡಬಿಟ್ಟ ಗ್ಯೆಯಾಳಿ ಅನೂ ಶಬ್ದಾ ನನಗ ಬರಧಾಂಗ ಮಾಡ್ರಿ."

"ಒಮ್ಮೆ ಹೇಳೀನಿ—ಈ ಮನೀ ಸುಖಾ ಕೆಡಸೂದಿಲ್ಲಂತ. ನಿನ್ನ ಇಟಗೊಂಡ ಇರಬೇಕಾಗಿದ್ರ ಬ್ಯಾರೇ ಲಗ್ನಾ ಯಾಕ ಮಾಡಕೋತಿದ್ದೆ. ನನ್ನ ಪಾಲಿಗೆ ನೀ ಎಂದೋ ಸತ್ತೀ. ಪೋಟಿಗೀ ದಾವೇ ಮಾಡತೀನೀ ಅನೂ ನಿಮ್ಮ ಅಪ್ಪಾ ನಾಯಿ ಆಗಿ ಹ್ಯಾಂಗ ಬಂದಾನ ಈಗ! ನಿನ್ನ ಕಟಿಗೊಂಡ ಬಂದ್ರ-ಮಾನಕ್ಕ, ಮರ್ಯಾದೀಗೆ ಅಂಜಿ ನಿನ್ನ ಮನ್ಯಾಗ ಇಟಕೋತೀನೀ ಅಂತ ಅವನ ಕಲ್ಪನಾ ಆಗಿರಬೇಕು. ನಾ ಸಾಫ ಹೇಳತೀನಿ-ಈ ಮನ್ಯಾಗ ನಿನಗ ಜಾಗಾ ಇಲ್ಲಂತ. ನೀ ಯಾರೋ—ನಾ ಯಾರೋ."

"ಕೈಹಿಡದ ಹೇಣ್ತೀ ಅಂತ ಇಲ್ಲೆ ನನ್ನ ಇಡಬ್ಯಾಡ್ರಿ—ಚೇಕಾರ. ನೌಕ್ರಿ-ಚಾಕ್ರೀ ಆಳಂತ ಇಡ್ರಿ. ಅತ್ತೀ ಅವರು ಉಟ್ಟ ಬಿಟ್ಟ ಸೀರಿ-ನಿಮ್ಮ ಹರಕ ಧೋತರಾ ಅಡ್ಡ ಹಚಿಕೊಂಡು ದಿನಾ ಹಾಕತೇನಿ. ನೀವು ಕೈ ಎತ್ತಿ ಹಾಕಿದ ಎಂಜಲಾನರೇ ತಿಂದ ಇರತೇನಿ. ನನಗ ಒಗತಾನ ಮಾಡೂ ಆಶಾ ಇಲ್ಲಾ. ಕೆಟ್ಟ ಹೆಸರು ಹೊರೂದರ ಪಾಪಾ ತಪ್ಪಸಲಿಕ್ಕೆ ನಾ ಏನ ಬೇಕಾದ್ದ ಮಾಡಲಿಕ್ಕೆ ಕಬೂಲಿದ್ದೀನಿ. ಇಲ್ಲೇ ಕಾಲಕಸಾ ಆಗ್ಯಾರ ಬದಕತೀನಿ. ತೌರ ಮನೀ ಹಂಬಲಾ ನನಗ ಎಂದಿಗೂ ಇರಲಿಲ್ಲಾ. ಅಪ್ಪನ ತಪ್ಪಿಗೆ ನನ್ನ ಬಲೀ ತಗೋಬ್ಯಾಡ್ರಿ. ಮನ್ಯಾಗ ಕೇಳಿನೋಡ್ರಿ. ಅವರೆಲ್ಲಾ ಒಪ್ಪಿದರ ನನಗ ಇರಲಿಕ್ಕೆ ಅಪಣೀ ಕೊಡ್ರಿ. ನಾ ಬ್ಯಾರೇ ಏನೂ ಬಯಸೂದಿಲ್ಲಾ. ಈಗೇ ಸುಟ್ಟ ಸುಂಣ ಆಗೀನಿ. ಕಂಣ ಮುಚ್ಚೊ ಕಾಲಕ್ಕ-ಮುತ್ತೈದಿ ಸಾವ ಬರಲಿ, ಅದೂ ಈ ಮನ್ಯಾಗಿಂದ ಹೆಣಾ ಹೊರಗ ಹೋಗಲಿ ಅಂತ ಅಷ್ಟೇ ಬೇಡಕೋತೀನಿ."

"ನಾ ಒಂದೇ ಮಾತ ಹೇಳೀನಿ, ನೀ ಎಂದೋ ನನ್ನ ಪಾಲಿಗೆ ಸತ್ತೀ ಅಂತ. ಇನ್ನ ಬ್ಯಾರೇ ಸಾಯೂದು ಉಳದೇ ಇಲ್ಲಾ. ಈ ಮನ್ಯಾಗ ನಿನ್ನ ಹೊಗಸಿ ಇದ್ದಾವರ ಒಗತಾನ ಕೆಡಸೂ ವಿಚಾರ ಇಲ್ಲ ನನಗ. ಯಾ ಹರಿ-ಹರ ಬ್ರಹ್ಮ ಬಂದರೂ ನಾ ಆಡಿದ ಮಾತು ತಿರಗಿ ತಗೋಂಬಾವಲ್ಲಾ.

ಬಂದ ಹಾದೀಲೇ ಹೊಂಟ ನಡೀರಿ. ಜೀಕಾರ ಕೋರ್ಟ ಕಚೇರಿ ಅಡ್ಡಾಡ್ಯಾಡಿ ಪ್ರೋಟಿಗೀ ತಗೋರಿ."

"ನಾ ಪೋಟಿಗೀ ದಶಿಂದ ಬಂದಿಲ್ಲಾ. ಹಾಂಗ ಬರಬೇಕಾಗಿದ್ರ— ಊರಮುಂದ ಗಂಗಾ ಹರೀತಿದ್ಲು. ಅಲ್ಲೀ ರಗಡ ಇಂಬು ಇತ್ತು. ಜೀವಾ ನೀಗತಿದ್ದೆ. ನಿಮ್ಮ ಕೈ ಹಿಡದು ಇಪ್ಪತ್ತ ವರ್ಷಾತು. ಗಂಡನ ಸುಖಾ— ಅತ್ತೀಮನೀ ಸುಖಾ—ನಾ ಏನ ಅನಭೋಗಸಲಿಲ್ಲಾ. ಇಂದ ಎಲ್ಲಾ ಮುಗ ದ್ಹದ. ಸುಖಾ ಅನ್ನೂದನ್ನ ನಾ ಬೇಡಿ ಬಂದಿಲ್ಲಾ. ಅತ್ತಿಗಿ-ನಾದ್ನೀಕಡಿಂದ ದೀಡಿ ಆಡಿಸಿಗೊಂಡು ಅಲ್ಲಿ ನಾಯೀಕಿಂತಾ ಅತತ್ತ ಆಗಿ ಬದಕೂದಕಿಂತಾ ಇಲ್ಲೀ ಬದಕಿದರ ಆಳಾಡೇನು. ನನ್ನ ದಿವಸ ಮುಗೀತ ಬಂದಾವ. ದೀಪ ಆರಲಿಕ್ಕೆ ಹೊತ್ತಹಿಡೀಲಿಕ್ಕಿಲ್ಲಾ. ಕಡೀಕಾಲಕ್ಕ ನಿಮ್ಮ ಕಾಲಾಗ ಬಿದ್ದು ಸಾಯಬೇಕಂತ ಬಂದೀನಿ. ಸಾವ ಬರೂವ ಆವ್ರ ನಿಮ್ಮ ಕೈಲೇನೂ ಬರಲಿ. ಅದೂ ಒಂದ ಪುಣ್ಯಾನೂ. ತೌರಮನೀ ನರಕದಾಗ ಕೊಳಿಯೂದಕಿಂತಾ ನಿಮ್ಮ ಕೈಲಿ ಸಾವ ಬಂದ್ರ ನಿಶ್ಚಿಂತಿ ಆತೂ ಅಂತೀನಿ. ನಾ ಭಾಳ ದಿನಾ ಬದಕ ಬಾರ್ದು ಅಂತ ಅನಿಸಿವ್ರು ದಿನಸಾದ್ನೀಲೇ ವಿಷಾ ಹಾಕ್ಯಾರ ಕೊಲ್ರಿ. ಆದರ ನನ್ನ ಕೈಬಿಟ್ಟು—ಮತ್ತ ಆ ನರಕದಾಗ ನುಗಸಬ್ಯಾಡ್ರಿ."

ಮುಂದೆ ಸರಿದು ಮಾಲತಾಯಿ ತಂದೆಯವರ ಕಾಲನ್ನು ಹಿಡಿಯ ಹೋದರು. ತಂದೆಯವರು ಸರ್ರನೇ ಕಾಲನ್ನು ಹಿಂತೆಗೆದುಕೊಂಡು ಚಟ್ಟನೇ ಎದ್ದು ನಿಂತು ಹೇಳಿದರು. "ಆಗದ ಮಾತು-ಮತ್ತ ಮತ್ತ ಕುಟ್ಟಬ್ಯಾಡ. ಒಮ್ಮೆ ಹೇಳೀನಿ. ನಿನಗ ಇಲ್ಲಿ ಜಾಗಾ ಇಲ್ಲಾಽ ಅಂತ. ಇಂಥಾ ಅಪ ರಾತ್ರ್ಯಾಗ ಬಂದು ಕಾಡಸೂ ಧೈರ್ಯಾ ಮಾಡಿದಾಕಿ, ನಾಳೆ ಏನ ಮಾಡ ಲಿಕ್ಕೂ ಹಿಂದಮುಂದ ನೋಡಾಕ್ಯಲ್ಲಾ. ಇದು ಸಣಸಣ ಮಕ್ಕಳ ಮರೀ ಯಿಂದ ತುಂಬಿದ ಮನೀ. ಹಾಲಹಾಕಿ ನಾಗರಹಾವ ಸಾಕಂತೀ ಏನ ನನಗಽ. ಅದೇನ ಮಾಡಿದ್ರೂ ತನ್ನ ಜಾತೀಗೇ ಹೋಗೂದು. ಮುಕಾಟ್ಲೆ ತೆಳಗ ಇಳದು ಹೋಗು. ಇದಽ ಏನ ಭೆಟ್ಟಿ ಆತು—ಇದಽ ಕಡೀದ ಅಂತ ತಿಳಕೋ. ಹಟಾಮಾಡಿ ನಾಳೆ ಇಲ್ಲೇ ನಿಂತ್ರಿ ಅಂದ್ರ, ನನ್ನ ಹೆಣಾ ನೋಡೇ ಹೋಗೂ ಪ್ರಸಂಗ ಬಂದೀತು."

"ಅಂಥಾದ್ದು ನಾ ಏನರೇ ಮಾಡೀನಿ ಪಾಪಾ. ಏನ ಲಗ್ನ ಆದ

ವರ್ಷ ನಿಮ್ಮ ಕೈಬಿಟ್ಟೆ, ಅಂದಿನಿಂದೂ ಒಂಟ್ಯಾಗಿ ನವೀತೀನಿ. ನಿಮ್ಮ ಸುಖಾ—ಮಕ್ಕಳಮರೀ ಸುಖಾ, ನಾ ಏನ ಕಾಣಲಿಲ್ಲಾ. ನಿಂತರ-ಕೂತರ ಅತ್ತ ಅತ್ತ ಹೈರಾಣಾಗೂದು ಒಂದಃ ಬರದದ ನನ್ನ ಹಣ್ಯಾಗ. ಇಂದರೆ ನನ್ನ ಭಾಗ್ಯ ತಗೀಲೀ ಅಂತ ಬಂದೀನಿ. ಸೋಕ್ಷ—ಮೋಕ್ಷ ನಿಮ್ಮನಃ ಕೂಡೇದ. ಕೊಲೂದಾದ್ರ ನನ್ನ ಕುತಿಗೀ ಹಿಚಿಕಿ ಬಿಡ್ರಿ. ಆವ್ರ ಈ ಮನ್ಯಾಗಿಂದ ಹೊರಗ ನುಗಸ ಬ್ಯಾಡ್ರಿ. ಆಣೀ ಇಟಗೊಂಡ ಬಂದೀನಿ-ಸತ್ತರ ನಿಮ್ಮ ಕೈಯ್ಲೀನಃ ಸಾಯಬೇಕು; ಬದಕಿದರ ಈ ಮನ್ಯಾಗ್ನಃ ಬದಕಬೇಕು ಅಂತ. ನಾ ಏನ ಇಲ್ಲಿಂದ ಅಗಳ್ಯಾಡಾಕಿ ಅಲ್ಲಾ. ಕೊಲೂದ ಆವ್ರ ಕೊಂದು ಬಿಡ್ರಿ. ದಯಾಮಾಯಾ ಏನೂ ತೋರಸಬ್ಯಾಡ್ರಿ.''

ಮಲತಾಯಿ ಧೊಪ್ಪನೆ ನೆಲಕ್ಕೆ ಬಿದ್ದು ಅಳತೊಡಗಿದರು. ತಂದೆಯವರು ಉತ್ತರ ಕೊಡದೆ ಸರಸರನೆ ತಮ್ಮ ಕಪಾಟಿನ ಕಡೆಗೆ ಹೋಗಿ ಅದರಲ್ಲಿದ್ದ ತಮ್ಮ ಪ್ರೀತಿಯ ಪಿಸ್ತೂಲನ್ನು ತಂದು ''ಇನ್ನೋಡು, ನಿನ್ನ ಕೊಂದರ ಖೂನೀ ಮಾಡಿದ್ದಕ್ಕ ಶಿಕ್ಷಾ ಭೋಗಸಬೇಕು. ಅದಕಿಂತಾ ಮೊದಲ ನಾನಃ ಗೋಳೀ ಹಾಕ್ಕೊಂಡು ಮೋಕಳೀಕ ಆಗತೇನಿ. ನಿಶ್ಚಿಂತ್ಯಾಗಿ ಆವ್ಯಾಲ ಈ ಮನ್ಯಾಗ ಇರು."

ತಂದೆಯವರ ಆ ಘೋರ ಪ್ರತಿಜ್ಞೆಯಿಂದ ಭೀತರಾಗಿ ಮಲತಾಯಿ ಎದ್ದು ನಿಂತು ಹೇಳಿದರು: ''ಅಷ್ಟುಮಾತ್ರ ಮಾಡಬ್ಯಾಡ್ರಿ, ಮಕ್ಕಳಮರೀ ಇದ್ದ ಮನೀಗೆ ನನ್ನಿಂದ ಅನಿಷ್ಟ ಆತು ಅನೂ ಶಬ್ದ ಬ್ಯಾಡಾ. ನನ್ನ ದುಃಖ ನನ್ನ ಸುತ್ತ ಅದ. ಅದರ ಪರಿಹಾರ ಆದೀತು ಅನೂ ಆಶಾದಿಂದ ಬಂದಿದ್ದೆ. ದೇವರಿಚ್ಛಾ ಇಲ್ಲಾ. ನಿಮ್ಮನ್ನ ಕೊಂದ ಪಾಪಾ—ಈ ಮನೀ ಅಮಂಗಳ ನೋಡೂ ಪಾಪಾ ಅಷ್ಟರಃ ನನಗ ಬರದಃ ಇಲ್ಲಿ. ನಾನಃ ಬೇಡಿ ಬಂದಿಲ್ಲಾ. ಯಾರಿಗರೇ ಕೊಡೂ ಅಂದ್ರ ಆದ ಹ್ಯಾಂಗ ಬಂದೀತು? ನಾಳೀನಃ ಇಲ್ಲಿಂದ ಕಣ್ಮರಿ ಆಗತೇನಿ. ನಿಮ್ಮ ಸಂಸಾರ ಹಾಳಮಾಡಿ ನಾ ಏನ ಸುಖಾ ಅನಭೋಗಸಬೇಕಾಗೇದ" ಎಂದು ನುಡಿದು ಅವರು ಬಾಗಿ ತಂದೆಯವರಿಗೆ ಕೊನೆಯ ನಮಸ್ಕಾರಮಾಡಿ, ಕೆಳಗೆ ಇಳಿದು ಬರಲೆಂದು, ತಿರುಗಿ ಅಡಿಯಿಡುವ ಮುನ್ನವೇ ನಾನು ಸರಸರನೆ ಇಳಿದು ಬಂದು ಹಾಸಿಗೆಯಲ್ಲಿ ಮಲಗಿಕೊಂಡು ಬಿಟ್ಟೆ.

ಸೋತ ದೇಹ--ವಿದೀರ್ಣ ಜೀವನವನ್ನು ಹೊರಲಾರದೆ ಹೊತ್ತುಕೊಂಡು ನಿಧಾನವಾಗಿ ಹೆಜ್ಜೆಯಿಡುತ್ತ ಅವರು ಬಂದು ಹೇಗೋ ಹಾಸಿಗೆಯ ಮೇಲೆ ಕುಳಿತರು. ಅವರ ಕಂಣಿನಿಂದ ನೀರು ಧಾರೆಯಾಗಿ ಹರಿಯುತ್ತಿತ್ತು. ಸರ್ವ ಸಂಕಟ, ಸರ್ವ ದುಃಖ, ಸರ್ವ ನಿರಾಶೆ, ಏಕೀಭವಿಸಿ ಮೂರ್ತಿಗೊಂಡಂತಾಗಿತ್ತು—ಅವರ ಆ ಸೋತ ದೇಹಾಕೃತಿ. ಅವರ ಆ ಏಕಾಂತ ದುಃಖವನ್ನು, ಪಡುವ ಪಾಡನ್ನು ಮೂಕ ಸಾಕ್ಷಿಯಾಗಿ ನೋಡುತ್ತ ನಾನು ತೆಪ್ಪನಾಗಿ ಒರಗಿದ್ದೆ.

* * * * *

ಇಂದಿರೆ ಬಂದು ಸ್ನಾನಕ್ಕೆಬ್ಬಿಸಿದಾಗಲೇ ನನಗೆ ಜಾಗರ ಬಂದುದು. ತೊಟ್ಟಿಕ್ಕುವ ಕಂಣೀರನ್ನು ಧೋತರದ ಚುಂಗಿನಿಂದ ಒರೆಸಿಕೊಳ್ಳುತ್ತ ಸ್ನಾನಕ್ಕೆ ನಡೆದೆ.

೨೩-೬-೧೯೫೩

# ಪಂತಮಾಸ್ತರ ಮುಂಬೈಗೆ ಹೋಗುತ್ತಾರೆ.

ಗೋಡೆಗೆ ಅಂಟಿ ನಿಂತ ಗಡಿಯಾರದ ಕೈ ಐದೂವರೆ ಗಂಟೆಯಾದದ್ದು ತೋರಿಸಿ ಒಂದು ಗಂಟೆ ಬಾರಿಸಿತು ಪಂತಮಾಸ್ತರರು ಗಡಿಯಾರದ ಕಡೆ ಗೊಮ್ಮೆ ದೃಷ್ಟಿಕ್ಷೇಪಮಾಡಿ ಎದ್ದು ನಿಂತರು; ಕೈಮುಗಿದರು. ವರ್ಗದಲ್ಲಿಯ ಹತ್ತೂ ಹುಡುಗರು ಅವರನ್ನು ಅನುಸರಿಸಿದರು. ಪಂತಮಾಸ್ತರರು, ಹತ್ತು ಹುಡುಗರು ಏಕಕಂಠದಲ್ಲಿ, ಅಪಸ್ವರವಿಲ್ಲದೆ ನಿಧಾನವಾಗಿ ಸಂಧ್ಯಾಮಂತ್ರ ಹೇಳಿದರು.

ಯಂ ಶೈವಾಃ ಸಮುಪಾಸತೇ ಶಿವ ಇತಿ ಬ್ರಹ್ಮೇತಿ ವೇದಾನ್ತಿನೋ।
ಬೌದ್ಧಾ ಬುದ್ಧ ಇತಿ ಪ್ರಮಾಣಪಟವಃ ಕರ್ತೇತಿ ನೈಯ್ಯಾಯಿಕಾಃ ॥
ಅರ್ಹನ್ ಇತ್ಯಥ ಜೈನಶಾಸನರತಾಃ ಕರ್ಮೇತಿ ಮೀಮಾಂಸಕಾಃ।
ಸೋಽಯಂ ವೋ ವಿದಧಾತು ವಾಂಛಿತ ಫಲಂ ಶ್ರೀಕೇಶವಸ್ಸರ್ವದಾ ॥

* * * *

ಆಕಾಶಾತ್ ಪತಿತಂ ತೋಯಂ ಯಥಾ ಗಚ್ಛತಿ ಸಾಗರಮ್।
ಸರ್ವ ದೇವನಮಸ್ಕಾರಃ ಕೇಶವಂ ಪ್ರತಿ ಗಚ್ಛತಿ ॥

ಕೈಮುಗಿದು ಹುಡುಗರು ಓರಣವಾಗಿ ಹೊರಗೆ ನಡೆದರು. ಪಂತಮಾಸ್ತರರು ಶಾಲೆಯ ಬಾಗಿಲಿಗೆ ಕೀಲಿಹಾಕಿ, ಇನ್ನೊಮ್ಮೆ ಜಗ್ಗಿ ನೋಡಿ, ಕೀಲಿ ಬಂದಿಸ್ತವಾಗಿ ಕುಳಿತ ಖಾತ್ರಿ ಮಾಡಿಕೊಂಡು ಬೀದಿಗಿಳಿದರು.

ಶನಿವಾರ ಉಳಿದೆಲ್ಲ ವರ್ಗಗಳಿಗೂ ಒಪ್ಪತ್ತಿನ ಶಾಲೆಯಾದರೂ, ಪಂತರ ಮುಲ್ಕೀ ಪರೀಕ್ಷೆಯ ಖಾಸ್ ವರ್ಗಕ್ಕೆ ಈ ನಿಯಮ ಅಪವಾದ. ರವಿವಾರ ಒಂದೇ ದಿನ ಪೂರ್ಣ ಬಿಡುವು. ದೊಡ್ಡ ಹಬ್ಬ-ಹುಂಣಿವೆ, ಊರಿನ ಜಾತ್ರೆಯ ಸಮಯದಲ್ಲಿ ಒಂದೆರಡು ದಿನ ಮಾತ್ರ ಸೂಟಿ. ಬಿಡುವಿನ ಅಗತ್ಯ ಪಂತಮಾಸ್ತರರಿಗೆ ಇಲ್ಲ. ಹುಡುಗರ ಆಶೆಗೆ, ನೀರು-ಬೂದಿ ಎರಚಿ ನಿರುತ್ಸಾಹಿಯಾಗಿ ಮಾಡಬಾರದೆಂದು ಸೂಟಿಯನ್ನು ಕೊಡುತ್ತಾರೆ; ಅಷ್ಟೇ. ಪಂತಮಾಸ್ತರರಿಗೆ ಸೂಟಿಯ ರಜೆಯ ಅಗತ್ಯ-ಅವಶ್ಯಕತೆ, ಕಳೆದ ಇಪ್ಪತ್ತು ಇಪ್ಪತ್ತೈದು ವರುಷದಲ್ಲಿಯೂ ಕಂಡಿಲ್ಲ. ತಮ್ಮ ಮಗ ಬಾಳನ ಮದುವೆಯಲ್ಲಿ

ನಾಕು ದಿನ ಅಷ್ಟೇ ಅವರು ಕಿರುಕಳ ರಜೆ ತೆಗೆಸಿದ್ದು. ಅನಂತರ ಎಂದೂ ಇಲ್ಲ. ನಮ್ಮ ಮಾತಿನಲ್ಲಿ, ಹೇಳಿಕೆಯಲ್ಲಿ ಅಪನಂಬಿಕೆ ಎನಿಸಿದರೆ ಸಾಲೆಯಿಂದ ಮನೆಗೆ, ಮನೆಯಿಂದ ಸಾಲೆಗೆ ದಿನಾಲು, ಅವರು ನಾಕು ಸಲ ಎಡತಾಕಿದ ಈ ರಸ್ತೆಯ ಸಾಕ್ಷಿ ಬೇಕಾದರೆ ಕೇಳಿರಿ. ಮನೆಯಿಂದ ಶಾಲೆಗೆ ಬರುವಾಗ ಈ ಬದಿ, ಶಾಲೆಯಿಂದ ಮನೆಗೆ ಹೋಗುವಾಗ ಆ ಬದಿ, ಬೀದಿಯ ಎರಡೂ ದಂಡೆಯಲ್ಲಿ ಅವರು ಕಳೆದ ೨೦-೨೫ ವರುಷ ಅಡ್ಡಾಡಿದ್ದಾರೆ.

ಮುಂಜಾನೆ ಏಳು ಗಂಟೆಗೆ ಇನ್ನೂ ಹತ್ತು ನಿಮಿಷವಿದ್ದಾಗ ಮನೆ ಬಿಟ್ಟರೆ, ತಾಕೋತಾಕ, ಶಾಲೆಯಲ್ಲಿ, ಏಳಕ್ಕೆ ಹಾಜರ್. ಹನ್ನೊಂದು ಗಂಟೆಗೆ ಮನೆ. ಮತ್ತೆ ಎರಡು ಗಂಟೆಗೆ ಹತ್ತು ನಿಮಿಷವಿದ್ದಾಗ ಶಾಲೆಗೆ ಪುನರಾಗಮನ, ಆರು ಗಂಟೆಗೆ ಮನೆಯ ಕಡೆಗೆ ನಿರ್ಗಮನ.

ಮಳೆಯ ದಿನಗಲ್ಲಿ ಮೋಡ ಕವಿದು ಹೊತ್ತಿರುವಾಗಲೇ ಕತ್ತಲಾಗಿದ್ದರೆ, ಬೀದಿಯ ಬದಿಗೇ ಇದ್ದ ಕಲ್ಲಪ್ಪನ ಕಿರಾಣಿಯ ಅಂಗಡಿಯಲ್ಲಿಯ ಗಿರಾಕಿ "ಶೆಟ್ಟೀ, ಕತ್ಲಿ ಕಮಕಾಳಾತು, ದೀಪಾನರೇ ಬೆಳಗಸೋಪಾ" ಎಂದರೆ, ಶೆಟ್ಟಿ ಹೇಳುತ್ತಾನೆ, "ಮಳ್ಳs, ಪಂತಮಾಸ್ತರ ಇನಾ ಮನೀ ಕಡೆ ಹೊಂಟಿಲ್ಲಾ, ಕತ್ಲಿ ಆತ ಅಂತಾನ" ಪಂತರು ಅವನಿಗೆ ಕತ್ತಲೆ-ಬೆಳಕಿನ ಕಾಲಮಾಪಕ ಯಂತ್ರ. ಕಪ್ಪಡದಂಗಡಿಯ ರತನ್ ಶೇಡಜಿಯ ಹಳೆಯ Z ಟಾಯಿಂಪೀಸ್, ಹಿಂದು-ಮುಂದಾಗಿದ್ದರೆ, ಶೇಡಜಿ, ಪಂತರ ಆಗಮನ-ನಿರ್ಗಮನದ ದಾರಿಕಾಯುತ್ತ ಕುಳಿತಿರುತ್ತಾನೆ. ಅವರು ಎರಡಕ್ಕೆ ಸಾಲೆಗೆ ಹೊರಟಿದ್ದರೆ, ಎರಡಕ್ಕೆ ಮೂರು ನಿಮಿಷ, ನಾಲ್ಕು ನಿಮಿಷ, ಗಡಿಯಾರದ ಮುಳ್ಳು ಹಿಂದೆ ಸರಿಸಿ, ರೇಡಿಯೋ ಟಾಯಿಮು ಹಚ್ಚಿಕೊಂಡು ಸಮಾಧಾನ ಪಡೆಯುತ್ತಾನೆ. ಶೇಡಜೀ ಗಡಿಯಾರ ಒಂದೆರಡು ಸಲ ಕೆಟ್ಟಿದೆ. ಆದರೆ ಪಂತಮಾಸ್ತರರ ಕಾಲಮಾಪಕ ಯಂತ್ರಪತ್ ಜೀವನ ಬಿನ್‌ತಕರಾರಿನಿಂದ, ಈ ಇಪ್ಪತ್ತೈದು ವರುಷ ಸರಾಗವಾಗಿ ನಡೆದಿದೆ.

ಆ ಖಾದೀ ಮುಂಡಾಸ, ಕೆಂಪು ಗೀರು ನಾಮ, ಸೆಟ್ ಕಾಲರಿನ ಖಾದಿಯ ಕೋಟು, ಕತ್ತಿನ ಸುತ್ತು ಒಂದು ಪ್ರದಕ್ಷಿಣೆ ಹಾಕಿ ಹೆಗಲಿನ ಒಂದು ಬದಿಯಿಂದ ಏರಿ, ಇನ್ನೊಂದು ಬದಿಯಿಂದ ಇಳಿದ ಖಾದಿಯ ದಪ್ಪ ಶಲ್ಲೆ, ಬಿನ್‌ಕಾಟೀ ಖಾದೀ ಧೋತರ, ಮುಧೋಳ ಮಾದರಿಯ ನವುರಾದ

ಚಪ್ಪಲಿ, ಈ ಎಲ್ಲ ವಸ್ತ್ರ, ವಸ್ತುಭೂಷಣ ಕೂಡ ಅವರ ದೇಹಕ್ಕಂಟಿ ಇಪ್ಪತ್ತೈದು ವರುಷದ ಮೇಲಾಯಿತು. ಎರಡು ಮಹಾ ಸಂಗ್ರಾಮ ನಡೆದು ಹೋದವು. ವಿಶ್ವ ಪ್ರಳಯಮುಖದಿಂದ ನಿರ್ವಿಣ್ಣವಾಗಿ ಬಿದ್ದು ಸತ್ತು ಬದುಕಿತು. ಬಹಳ ಬದಲಾವಣೆಯಾಯಿತು. ಮುಖಪರಿಚಯ ಮರೆಯುವಷ್ಟು ಕದಲು-ಬದಲಾಯಿತು. ಆದರೆ ಪಂತಮಾಸ್ತರರು ಹೇಗಿದ್ದರೋ ಹಾಗೇ ಇದ್ದಾರೆ. ಅದೇ ನಾಮ, ಅದೇ ವಸ್ತ್ರವಿನ್ಯಾಸ. ಅದೇ "ಯಂ ಶೈವಾಃ ಸಮುಪಾಸತೇ ಶಿವ ಇತಿ" ಪ್ರಾರ್ಥನೆ. ಅದೇ ಸ್ವರ್ಣ ವರ್ಣ. ಅದೇ ಆರು ಫೂಟಿನ ಎತ್ತರ. ಅದೇ ಭೂಮಿಗೆ ಅಭಿಮುಖವಾಗಿ ತಲೆಯೆತ್ತದೆ ನಡೆಯುವ ಗಂಭೀರ ರೀತಿ. ಏನೂ ಏನೂ ಬದಲಾವಣೆ ಇಲ್ಲ. ಮುಖದ ಮೇಲೆ ಒಂದು ನೆರೆಯಿಲ್ಲ. ಒಂದು ಸುಕ್ಕಿನ ಗೆರೆಯಿಲ್ಲ. ಪಂತರನ್ನು ಮುಪ್ಪಿನ ಶಾಪ ತಟ್ಟಿಲ್ಲ. ಹರೆಯ ಹಣ್ಣಾಗುವ ದಾರಿಯಲ್ಲಿದ್ದರೂ ಕಳಿತು ಕೊತಕೊತವಾಗಿಲ್ಲ. ಯಾರಾದರೂ ದಾರಿಯಲ್ಲಿ ಭೆಟ್ಟಿಯಾಗಿ "ನಮಸ್ಕಾರ್ರೀ ಮಾಸ್ತರ" "ನಮಸ್ಕಾರ ಪಂತಮಾಸ್ತರ" ಎಂದರೆ, ಪಂತಮಾಸ್ತರರ ಜೋಡಿಸಿದ ಕೈ ನತಶಿರಕ್ಕೆ ತಂತಾನೇ ತಗಲುತ್ತಿದೆ. ಅವ್ಯಾಜ ಅಂತಃಕರಣದ ಮೀಸಲು ಮುರಿಯದ ಮಂದಹಾಸ ಮುಖದಲ್ಲಿ ರಾರಾಜಿಸುತ್ತಿದೆ. ಇಪ್ಪತ್ತೈದು ವರುಷದ ಹಿಂದೆಯೂ ಇದೇ ಪಾಂಗು; ಇಂದೂ ಇದೇ ರೀತಿ. ಜಗತ್ತು ಬದಲಾಗಿದೆ, ಆದರೆ ಪಂತಮಾಸ್ತರರಲ್ಲಿ ಏನೂ ಬದಲಾವಣೆಯಾಗಿಲ್ಲ.

ಪಂತರ ಮಾನದಿಂದ ನೋಡುತ್ತಿರಲಾಗಿ, ಶ್ರೀಮತಿ ಪಂತರು-ನರ್ಮದಾಕಾಕೂ ಮುಪ್ಪಾದವರಂತೆ ಕಾಣಿಸುತ್ತಾರೆ. ಹಾಗೆ ಆಗುವ ಕಾರಣವಿರಲಿಲ್ಲ. ಒಂದೇ ಒಂದು ಮುತ್ತಿನಂತಹ ಕೂಸು ಹೆತ್ತು, ಅವಳು ಬಸಿರು ಬಯಕೆ ಬಾಣಂತಿನಕ್ಕೆ ಕೊನೆಯ ಶರಣಾರ್ಥಿ ಹೇಳಿದ್ದರು. ಅನ್ಯಚಿಂತೆಯ ಝಳವೂ ತಾಕುವಂತಿರಲಿಲ್ಲ; ತಾಕಿಲ್ಲ. ಸಂಬಂಧಿನವರಿರುವಾಗಲೇ, ದಮ್ಮು ಸೇರಿಕೊಂಡಿತ್ತು. ಅದೇ ಅವರನ್ನು ಆಗೀಗ ಹಣ್ಣು ಮಾಡುತ್ತಿತ್ತು. ಋತುಮಾನ ಬದಲಿಸಿದಾಗ, ಅದರ ಕಾಟ ಹೆಚ್ಚಾಗಿ, ಅವರನ್ನು ಅಕಾಲಿಕ ವಾರ್ಧಕ್ಯದೆಡೆಗೆ ಎಳೆಯುತ್ತಿತ್ತು. ಇಲ್ಲದಿದ್ದರೆ ಅವರೂ ಪಂತರ ಬೆಲ್ಲದಚ್ಚಿನ ಗೊಂಬೆಯೇ!

ತುಂಬಿದ ಮುತ್ತೈದೆ. ಹಣೆಯ ತುಂಬ ಗೋದೀಗೀರು ಮಾಂಗಲ್ಯ ಚಿಹ್ನೆ. ಗಲ್ಲದಲ್ಲಿ ಅರಿಷಿಣ ಬೊಟ್ಟು, ತಲೆ ತುಂಬ ಎಳೆದುಕೊಂಡ ಸೆರಗು,

ಕೇದಿಗೆಯ ವರ್ಣ. ಅಷ್ಟು ಕುಳ್ಳವಲ್ಲ, ಅಷ್ಟು ಬೀಸಲ್ಲ. ಮಾಟಾದ ತುಂಬಿದ ಮುತ್ತೈದೆ.

ಪಂತಮಾಸ್ತರರ ಹಿರಿಯರು, ರಾಮದಾಸ ಸ್ವಾಮಿಗಳ ಜಾಫಳದಿಂದ ಇತ್ತ ಕಡೆ ವಲಸೆ ಬಂದರೆಂದು ಹೇಳುತ್ತಾರೆ. ಪಂತರು ಜಾಫಳದಿಂದ ಬಂದದ್ದನ್ನು ಮರೆತಿದ್ದಾರೆ. ರಾಮದಾಸ ಸ್ವಾಮಿಗಳನ್ನು ಅಷ್ಟೇ, ಆರಾಧ್ಯ ದೈವತವನ್ನಾಗಿ ಮಾಡಿಕೊಂಡಿದ್ದಾರೆ. ಖಟ್ಟಿಗೆ ಹಚ್ಚಿ, ಐತಿಹಾಸಿಕ ಸಂಶೋಧನೆಯ ಆಸ್ಥೆ ಕೆರಳಿ ಯಾರೂ ಪಂತರನ್ನು ಕುಲವೃತ್ತಾಂತ ತಿಳಿಸಲು ಕೇಳಿಲ್ಲ. ಪಂತರೂ ಅದನ್ನು ಯಾರಿಗೂ ಹೇಳಿಲ್ಲ.

ಇಪ್ಪತ್ತು ವರ್ಷವಾಯಿತು, ಪಂತರು ಮುಲ್ಕೀಪರೀಕ್ಷೆಯ ವರ್ಗವನ್ನು ನಡೆಸಹತ್ತಿ. ಅವರು ಲೋ. ಬೋ. ಶಾಳಾಖಾತೆಯನ್ನು ಸೇರಿ ಐದು ವರುಷವಾದ ನಂತರ ಒಮ್ಮೆ ಹೆಡ್‌ಮಾಸ್ತರ ಲಿಂಗಪ್ಪನವರು, ಪಂತರಿಗೆ ಮುಲ್ಕೀ ಪರೀಕ್ಷೆಯ ವರ್ಗದ ಚಾಲಕತ್ವ ವಹಿಸುವ ಸಂಧಿಯನ್ನು ಕಲ್ಪಿಸಿಕೊಟ್ಟರು. ಆ ವರ್ಷ ಪರೀಕ್ಷೆಗೆ ಹೋದ ಐದೂ ಹುಡುಗರು ಪಾಸಾದರು. ಶೇಕಡ ಪರಿಣಾಮವಾಯಿತು. ಮುಲ್ಕೀ ಪರೀಕ್ಷೆಯ ವರ್ಗ ಅಂದಿನಿಂದ ಪಂತರ ಕೊರಳಿಗೇ ಬಿತ್ತು. ಅಂದಿನಿಂದ ಇಂದಿನ ವರೆಗೆ, ಶಾಲೆಯ ರೆಕಾರ್ಡು ಹೇಳುತ್ತಿದೆ—ಐದಕ್ಕೆ ಕಡಿಮೆ ಇಲ್ಲ, ಹತ್ತಕ್ಕೆ ಹೆಚ್ಚಿಲ್ಲ. ಅಷ್ಟು ಹುಡುಗರು ಪರೀಕ್ಷೆಗೆ ಕಟ್ಟುತ್ತಾರೆ; ಎಲ್ಲರೂ ಪಾಸಾಗುತ್ತಾರೆ. ನಮ್ಮೂರ ಶಾಲೆಯ ರೆಕಾರ್ಡು ಜಿಲ್ಹೆಯಲ್ಲಿಯೇ ಪ್ರಥಮ ಶ್ರೇಣಿಯದಾಗಿದೆ. ಪಂತರಿಗೆ ಶಾಲೆ, ಅದರಲ್ಲಿಯೂ ಮುಲ್ಕೀಪರೀಕ್ಷೆಯ ವರ್ಗ ಒಂದೇ ಧ್ಯಾಸ. ಯಾವ ಅನ್ಯ ಆಶೆ ಆಮಿಷ ಅವರನ್ನು ತುಡುಕಿಲ್ಲ. ಅವರ ಸಾಧನೆ, ನಿಷ್ಕಾಮ ನಿಷ್ಕಾಂಚನವಾಗಿ, ಕಳೆದ ಅಖಂಡ ಎರಡು ದಶಕದಿಂದ ಸಾಗಿದೆ. ಎಲ್ಲಿಯೂ ಖಂಡ ಬಿದ್ದಿಲ್ಲ.

ಆದರೆ ಲೋ. ಬೋ. ಶಾಳಾ ಅಧಿಕಾರಿಗಳ ಗಮನಕ್ಕೆ ಪಂತರ ಸಾಧನೆಯ ದಿವ್ಯ ಬಂದಿಲ್ಲ. ಅವರ ಸಂಬಳದಲ್ಲಿ ಏರಿಳಿತವಾಗಿಲ್ಲ. ನಿರ್ದಿಷ್ಟ ಅವಧಿಗೆ ಸಿಗಬೇಕಾದ 'ಇಂಕ್ರಿಮೆಂಟ' ಅವಧಿ ಮೀರಿ ನಾಲ್ಕು ತಿಂಗಳ ನಂತರ ಸಿಗುತ್ತಿದೆ, ಮುಣುಗುವದಿಲ್ಲ. ಉಳಿದ ಶಿಕ್ಷಕರು 'ಇಂಕ್ರಿಮೆಂಟ' ಬರುತ್ತಿದೆ ಎಂದರೆ, ನಾಕು ರೂಪಾಯಿ ಖರ್ಚುಮಾಡಿ, ಡಿ. ಎಲ್. ಬಿ.

ಆಫೀಸಿನ ಕಾರಕೂನ ಸಾಹೇಬರಿಗೆ, ಬೆಂಡೆ-ಬಾಳೆಯೆಲೆಯ ಅಲ್ಪ ನಜರಾಣಿಯನ್ನು ಅರ್ಪಿಸಿ, ಅವರನ್ನು ಖುಷ್‌ರನ್ನಾಗಿ ಮಾಡಿ, ಅದೇ ತಿಂಗಳೇ "ಇಂಕ್ರಿಮೆಂಟಿನ" ಹೆಚ್ಚಿನ ಸಂಬಳ ಪಡೆಯುತ್ತಾರೆ. ಪಂತರಿಗೆ ಅವರಷ್ಟು ಧಾವತಿ ಇಲ್ಲ. ಉಳಿದ ಶಿಕ್ಷಕರು, ಪಾಪ, ಮನೆತುಂಬ ಮಕ್ಕಳು ಮರಿ, ಬೇನೆ ಬೇಸರಿಕೆ, ಸಾಂಸಾರಿಕ ತಾಪತ್ರಯದಿಂದ ನುಗ್ಗಾದವರು. ಈ ಹೆಚ್ಚಿನ ಸಂಬಳದ ಎರಡೋ, ನಾಕೋ ರೂಪಾಯಿಯೇ ಅವರಿಗೆ ಎಷ್ಟೋ ಆಧಾರ. ಅದನ್ನು ಪಡೆಯಲು ನಾಕಾರು ಈಗ ಕೈಬಿಟ್ಟರೂ ಅನ್ಯಾಯವಲ್ಲ. ಪಂತ ಮಾಸ್ತರರಿಗೆ ಅಂಥ ತಾಪತ್ರಯವೂ ಇಲ್ಲ, ತಗಾದೆಯೂ ಇಲ್ಲ.

"ಪಂತರೇ, ನಿಮ್ಮ ಇಂಕ್ರೀಮೆಂಟ, ನಾಕ ತಿಂಗಳದ್ದು ಬರಬೇಕು. ಒಂದು ಅರ್ಜಿನರ‍್ಕ ಮಾಡರೀ" ಎಂದು ಸಹ ಶಿಕ್ಷಕರು ಪಂತರನ್ನು ಪುಸಲಾಯಿಸುತ್ತಾರೆ. ಪಂತರು ತಮ್ಮ ಅವ್ಯಾಜ ಮೃದುಹಾಸ ಸೂಸಿ, ಕೈಮುಗಿದು ವಂದಿಸುತ್ತಾರೆ.

"ಮಾಸ್ತರ‍್ಕ ಡಿ. ಎಲ್. ಬಿ. ಅಂಥಾ ಮಹಾ ಸಂಸ್ಥಾ‍್ಕ ಬಡ ಶಾ. ಮಾ. ನ ಋಣದಾಗ ಅದ‍್ಕ ಅಷ್ಟ‍್ಕ ಅಭಿಮಾನ ನಮಗ ನಿಮಗ. ಬರಲಿ, ಬರಲಿ ಇಂಕ್ರಿಮೆಂಟು ಎಲ್ಲಿ ಓಡಿ ಹೋಗತದ. ಸರಕಾರದ ಮ್ಯಾಲಿನ ಸಾಲಾ ಎಂದೂ ಮುಣೂಗೂ ಹಾಂಗಿಲ್ಲಾ."

ಇದು ಇಂಕ್ರಿಮೆಂಟ ಬಂದಾಗಲೆಲ್ಲ ನಡೆಯುವ ಠರಾವಿಕ ಮಾತು. ಇಂಕ್ರಿಮೆಂಟಿನ ಒಟ್ಟು ಹಣ ಕೂಡಿ ಬಂದರೆ, ಪಂತರು ಅವನ್ನು ಪೋಸ್ಟಿನಲ್ಲಿ ಬಾಳನ ಹೆಸರಿಗೆ ಜಮಾ ಮಾಡಿಬಿಡುತ್ತಾರೆ.

ಪಂತರು ಮೂವತ್ತು ರೂಪಾಯಿ ಸಂಬಳ ಸಿಗುವಾಗಲೂ ಐದು ರೂಪಾಯಿ ಪ್ರಾವ್ಹಿಡೆಂಟ ಫಂಡು ತೆಗೆದಿಡುತ್ತಿದ್ದರು. ಈಗ ಎಂಭತ್ತು ಸಿಗುತ್ತಿದ್ದರೂ ಐದೇ ರೂಪಾಯಿ ತೆಗೆದಿಡುತ್ತಾರೆ. ಪೋಸ್ಟಿನಲ್ಲಿ ಐದು ರೂಪಾಯಿ ಜಮಾ ಮಾಡುತ್ತಾರೆ. ಬಾಳ ಕಲಿಯುವದು ಮುಗಿದಿದೆ. ಇದೇ ವರ್ಷ ನವಕರಿಗೂ ಹತ್ತಿದ್ದಾನೆ. ಅವನಿಗೆ ಹಣ ಕಳಿಸುವ ಅಗತ್ಯ ಉಳಿದಿಲ್ಲ. ಪೋಸ್ಟಿನಲ್ಲಿ ಪ್ರತಿ ತಿಂಗಳೂ ಮೂವತ್ತು ರೂಪಾಯಿ ಜಮಾ ಮಾಡಿದರೂ ನಡೆಯುತ್ತಿದೆ. ಅದರಿಂದ ಅವರಿಗೆ ತೊಂದರೆ ಎನಿಸುವದಿಲ್ಲ. ಗಾಡಿ ಏನಾದರೂ ರೂಳು ಬಿಟ್ಟು ಸರಿದರೆ, ಅಡಿ-ಅಡಚಣಿಯ ವೆಚ್ಚದ ಬಾಬು ಕಾಣ

ಬೇಕು. ಅದು ಶಕ್ಯವೇ ಇಲ್ಲ. ಪಂತರ ಗಾಡಿ, ಬ್ರೆಕ್‌ಡೌನ ಆಯಿತು, ಫೇಲ ಆಯಿತು ಎಂದದ್ದನ್ನು ಯಾರೂ ಕಂಡಿಲ್ಲ, ಯಾರೂ ಕೇಳಿಲ್ಲ.

ಪಂತರ ಹಿರಿಯರಿಂದ ಬಂದ ಒಂದು ಮನೆಯಿದೆ. ಮನೆಯ ಮೂರು ಪಟ್ಟು ದೊಡ್ಡ ಹಿತ್ತಲವಿದೆ. ಒಂದು ಹತ್ತು ಎಕರೆಯ ಬೆಣ್ಣೆಯಂತಹ ಮಣ್ಣಿನ ಭೂಮಿಯಿದೆ. ಪಂತರ ಹೊಲವನ್ನು ಅರ್ಧಪಾಲಿನಿಂದ ಗೌಡರು ಸಾಗುಮಾಡುತ್ತಿದ್ದಾರೆ. ಎಂದೂ ಲಾವಣಿ ತಪ್ಪಿಲ್ಲ. ಕಾಳುಕಡಿಯನ್ನು ಕೊಡುವದನ್ನು ತಪ್ಪಿಸಿಲ್ಲ. ತಗಲಿಗೆ ಅವಕಾಶವೇ ಇಲ್ಲ ಇಬ್ಬರಲ್ಲೂ. ಪಂತರ ಹೊಲ ಬೆಳೆಯಲಿಲ್ಲ, ಪಡ ಬಿತ್ತು, ಕೈ ಕೊಟ್ಟಿತು ಈ ವರ್ಷ, ಎನ್ನುವ ಮಾತು ಎಂದೂ ಕೇಳಿ ಬಂದಿಲ್ಲ.

ಪಂತರ ದೊಡ್ಡ ಹಿತ್ತಲಲ್ಲಿ ಅಪಲಾಂಡ ಹತ್ತಿಯ ಹತ್ತಿಪ್ಪತ್ತು ಗಿಡ ಇವೆ. ಎರಡು ಮೂರು ವರುಷಕ್ಕೊಮ್ಮೆ ಕಟಾವಾಗಿ, ಮತ್ತೆ ಬೇರೆ ಅಗಿ ಚಿಗಿತು ಗಿಡವಾಗುತ್ತಿವೆ. ಇವರ ಹತ್ತಿಯನ್ನೆಲ್ಲ ಬಿಡಿಸುವದು, ಹಿಂಜುವದು, ಅರಳೆ ಮಾಡುವದು, ನೂಲುವದು, ನೂತ ಕುಕ್ಕಡಿಯನ್ನು ನೆಯ್ಗಾರನಿಗೆ ಕೊಟ್ಟು ತಮಗೆ ಬೇಕಾದ ಅರಿವೆ ಮಾಡಿಸಿ ಪಡೆಯುವದು. ಚಚ್ಚೌಕ ಮಡಿಯಲ್ಲಿ, ಕೋತಂಬರಿ, ಮೆಂತೇಪಲ್ಲೆ, ರಾಜಗಿರಿ, ಮೆಣಸಿನ ಅಗಿ ಮಲಮಲಿಸುತ್ತಿವೆ. ಬಚ್ಚಲ ನೀರಿನ ಸೆಲೆಗೆ ಆಸರೆ ಹಿಡಿದ ಬಾಳೆ, ಶಾಂವಿಯ ಪಲ್ಲೆ ಯಾವಾಗಲೂ ಹಸಿರು ಮುರಿಯುತ್ತಿವೆ. ಶಾಲೆ ಬಿಟ್ಟಮೇಲೆ ಪಂತರಿಗೆ ಅನ್ಯ ಉದ್ಯೋಗವೇ ಇಲ್ಲ. ತಾಸು, ಅರ್ಧತಾಸು ನೂಲುವದು, ಹಿತ್ತಲಲ್ಲಿ ಹರಿ ಕಡಿದ, ಬೂದಿ ಶೆಗಣಿ ಬೆರೆಸಿದ ಗೊಬ್ಬರ ಚೆಲ್ಲಿದೆ, ಪಡವಲ, ಅವರೆಯ ಬಳ್ಳಿಗೆ ಪಂದರ ಹಾಕಿದೆ, ಇದೇ ಪಂತರ ಕೆಲಸ. ಜೊಗಚಿಯ ಗಿಡ, ತುಳಸಿ ಅಷ್ಟೇ—ದೇವರ ಪೂಜೆಯ ಅಗತ್ಯದ ಪತ್ರಪುಷ್ಪದ ಯೋಜನೆಯನ್ನು ಪಂತರು ಮಾಡಿದ್ದರು. ಬಾಳ ಅದರಲ್ಲಿ ಭರತೀ ಹಾಕಿದ. ಕಾಲೇಜಿನಿಂದ ತಿರುಗಿ ಬರುವಾಗೊಮ್ಮೆ ಗುಲಾಬಿ, ಮಲ್ಲಿಗೆ, ಮೋಗರಾ ಅಗಿ ತಂದು ಹಚ್ಚಿದ. ಅವೂ ಚಿಗಿತು ಮಲಮಲಿಸಿವೆ. ವಸಂತಶ್ರೀಯನ್ನು ಧರಿಸಿ ಪುಷ್ಪಿತೆಯಾಗುತ್ತಿವೆ. ಪಂತರು ಹೆಚ್ಚಿನ ಹೂವನ್ನು, ನಿತ್ಯ, ಬಾಳೆಯ ಎಲೆಯ ದೊಡ್ಡದೊನ್ನೆಯಲ್ಲಿ ಹಾಕಿ, ವಿಠ್ಠಲ-ರಕುಮಾಯಿಯ ಗುಡಿಗೆ ಪೂಜೆಗೆಂದು ಕೊಟ್ಟು ಬರುತ್ತಾರೆ. ಗುಡಿಯ ಅರ್ಚಕ ನಾರಾಯಣಭಟ್ಟ ಎಂದೂ ತಾನಾಗಿಯೇ ಹೂ-

ತುಳಸಿ ತರುವ ಶ್ರಮವನ್ನೆಲ್ಲ ತೆಗೆದುಕೊಂಡಿಲ್ಲ. ಪಂತರ ಅಲ್ಪ ದೇವತಾ ಸೇವೆಗೆ ಅನುವು ಮಾಡಿಕೊಡುತ್ತಿದ್ದಾನೆ.

ಮೊದಲನೇ ಅಸಹಕಾರದ ಕಾಲದಲ್ಲೇ ಪಂತರು ಖಾದೀ-ಸ್ವದೇಶಿ ವ್ರತಧಾರಣೆ ಮಾಡಿದರು. ಸ್ಥೂಲ ವ್ಯಾಪಕಾರ್ಥದಲ್ಲಿ ಅವನ್ನು ಸ್ವೀಕರಿಸಿದರು. ಪಂತರು ಆಣೆಮಾಡಲಿಲ್ಲ, ಪ್ರತಿಜ್ಞೆ-ಪಣ ತೊಡಲಿಲ್ಲ. ದರಿದ್ರನಾರಾಯಣ ಆದೇಶ ಕೊಟ್ಟಿದ್ದಾನೆ ಕಾಲಲ್ಲಿ-ಕೈಯಲ್ಲಿ-ಜೀವದಲ್ಲಿ ಶಕ್ತಿ ಇರುವ ತನಕ ನಡೆಸುತ್ತೇನೆ. ಅದನ್ನು ನಡೆಸುವ ಭಾರವೂ ಅವನದೇ, ನಾನು ಕೇವಲ ಸಾಧಕ ಎಂದು ವ್ರತವನ್ನು ಅಂಗೀಕರಿಸಿದರು. ಇಂದಿನತನಕವೂ ಪಾಲಿಸುತ್ತ ಬಂದಿದ್ದಾರೆ. ಅವರಲ್ಲಿ ಒಂದೇ ಒಂದು ವಿದೇಶಿ ಚಟವಿದೆ: ಅದು ತಪ್ಪದೆ ಎರಡುಹೊತ್ತು ಮಾತ್ರ ಸೇವಿಸುವ ಎರಡು ಕಪ್ಪು ಚಹ. ಉಂಡ ಊಟ, ಕುಡಿದ ನೀರು, ಮುಂಜಾನೆ ಶಾಲೆಗೆ ಹೋಗುವಾಗ, ಸಂಜೆ ಶಾಲೆಯಿಂದ ಬಂದ ಮೇಲೆ ಕುಡಿಯುವ ಒಂದೊಂದು ಕಪ್ಪ ಚಹ. ಅಡಿಕೆಯ ಹೋಳು, ಅರ್ಧ ಎಲೆ ಕೂಡ ಎಂದೂ ಅವರು ಮುಟ್ಟಿಲ್ಲ.

ಪಂತಮಾಸ್ತರರು ದೈವದಲ್ಲಿದ್ದೂ ಸುಖ ಅನುಭೋಗಿಸದ ನಿರ್ಭಾಗ್ಯರೆಂದು ಜನರ ತಕರಾರು. "ಇರುವವರು ಮೂವರು. ಗಂಡ-ಹೆಂಡತಿ ಒಂದು ಹುಡುಗ; ರಾಜನಂತೆ ಇರಬೇಕು, ಅದನ್ನು ಬಿಟ್ಟು ಸುಮ್ಮನೇ ಹೊಟ್ಟೇ ಸುಟ್ಟುಕೊಳ್ಳುತ್ತಾರೆ, ಇಷ್ಟು ಯಾರಿಗಾಗಿ ಮಾಡಿಟ್ಟು ಹೋಗುತ್ತಾರೆ" ಎಂದು ಜನ ಕೇಳುತ್ತಾರೆ. ತಮ್ಮ ತಮ್ಮಲ್ಲಿಯೇ ಚರ್ಚಿಸುತ್ತಾರೆ. ಯಾರಿಗೂ ಪಂತರ ಅರ್ಥವಾಗಿಲ್ಲ. ಹೊರನೋಟಕ್ಕೆ ಪಂತರು ಸುಖಿಯಾಗಿ-ಸಮಾಧಾನಿಯಾಗಿ ಕಾಣುತ್ತಾರೆ. ನಾಕು ಜನರೆದುರು ತಮ್ಮ ಸುಖ-ದುಃಖ ಹೇಳಿಕೊಳ್ಳುವದಿಲ್ಲ. ಜಗತ್ತಿಗೆ ತನ್ನ ಭಾರ ತನಗೇ ಹೊರಲಾರದಾಗಿರುವಷ್ಟರ ಕಲ್ಪನೆ ಅವರಿಗಿದೆ. ತಮ್ಮ ಒಂದು ಮೊರದ ಭಾರವನ್ನೂ ಅವರು ಆ ಒಜ್ಜೆಯಲ್ಲಿ ಹಾಕಲಾರರು.

ಮೂವರೂ ರಾಜನಂತೆ ಇದ್ದರೆ, ಬಾಳನ ಶಿಕ್ಷಣವಾಗುತ್ತಿರಲಿಲ್ಲ. ಅವನನ್ನು ಕಲಿಸಿ ಮುಂದೆ ತಂದು, ಮನುಷ್ಯನನ್ನಾಗಿ ಮಾಡಲು ಎರೆದ ತುಟ-ಪುಂಜೀ ಬಂಡವಲವನ್ನು, ತಮ್ಮ ರಾಜೋಪಭೋಗಕ್ಕೆ ವಿನಿಯೋಗಿಸಿದ್ದರೆ, ಬಾಳ ಮನುಷ್ಯನಾಗುತ್ತಿದ್ದಿಲ್ಲ. ಸಾಲ-ಸೋಲು ಮಾಡಿ ಅವನಿಗೆ ಕಲಿಸಿದ್ದರೆ

ವಿದ್ಯೆಯೊಡನೆ ಸಾಲ ಮಾಡುವ, ಅಂದಾಧುಂದೀ ವೆಚ್ಚಮಾಡುವ ವಿದ್ಯೆಯನ್ನೆ ಅವನಿಗೆ ಕಲಿಸಿದಂತಾಗುತ್ತಿತ್ತು. ಹಡೆದ ತಂದೆಯಾದ್ದರಿಂದ, ಅವನನ್ನು ತಿದ್ದಿ ತೀಡುವ ಕರ್ತವ್ಯಕರ್ಮ ತಮಗೆ ದೇವರ ಆದೇಶ. ಅದನ್ನು ತಪ್ಪಬಾರದು; ತಪ್ಪಿದರೆ ಹುಟ್ಟಿಸಿದ ತಂದೆಗೆ ತಾವು ಕೃತಘ್ನರಾದಂತೆ; ಮಗನಿಗೆ ಅನ್ಯಾಯ ಬಗೆದಂತೆ. ಪಂತರು ಈ ರೀತಿ ಭಾವಿಸಿದ್ದಾರೆ.

ಜನರೆನ್ನುವ ರಾಜೋಪಭೋಗದ ಅರ್ಥವೂ ಅವರಿಗಾಗಿಲ್ಲ. ಪಂತರು ತಮ್ಮ ಮಟ್ಟಿಗೆ ರಾಜವೈಭವವನ್ನೆಲ್ಲ ಅನುಭವಿಸುತ್ತಾರೆ. ಮನೆಯಲ್ಲಿ ಆಕಳಿದೆ. ಅದರ ಸೇವೆಯನ್ನು ಮನಸಾ ಮಾಡುತ್ತಾರೆ. ಅದು ಒಲಿದು ಕೊಟ್ಟ ಹಾಲು-ಹೈನದಲ್ಲಿ ಸುಖ ಹೆಚ್ಚಿಕೊಂಡು ಉಣ್ಣುತ್ತಾರೆ. ಹಿತ್ತಲಲ್ಲಿ ಪಲ್ಲೆ-ಕಾಯಿಯ ಸಂಪತ್ತಿದೆ. ತಮ್ಮ ಹೊಲದ ಕಾಳು-ಕಡಿ ಬರುತ್ತಿದೆ. ತಾವೇ ಹಚ್ಚಿ ಬೆಳೆಸಿದ ಹತ್ತಿಯನ್ನು ಒಂಜಿ ನೂತು ಅಂಗವಸ್ತ್ರ ಮಾಡಿಕೊಳ್ಳುತ್ತಾರೆ. ಎಲ್ಲಾ ಶ್ರಮದ, ಬೆವರು ಹರಿಸಿ ದುಡಿದ ಸಾಧನೆಯ ಅಮೃತಫಲ. ಇದಕ್ಕಿಂತ ಅವರು ಇನ್ನಾವ ಹಿರಿಯ ರಾಜವೈಭವಕ್ಕೆ ಕೈ-ಚಾಚಬೇಕಾಗಿದೆ?

ಜನರ ಅಂಬೋಣ ಬೇರೆ—ಪಂತರು ತಮ್ಮಂತೆ ಸಾಲ ಮಾಡಿಲ್ಲ. ಅದರ ನೆರಳಾಟದಲ್ಲಿ ನವೆದು ಕಿರಿಕಿರಿ ಮಾಡುವದಿಲ್ಲ. ಹತ್ತು ಜನರಲ್ಲಿ ಆ ನೋವಿನ ಸಂಕಟ ತಾಳದೆ ಆಕ್ರಂದನ ಮಾಡುವದಿಲ್ಲ. ಹೊಟ್ಟೆಕಡಿತವೂ ಅನೇಕ ಮುಖವಾಗಿದೆ. ಪಂತರನ್ನು ಕಂಡು ಆಡಿಕೊಳ್ಳುವ ಜನರ ಹೊಟ್ಟೆಕಡಿತ ಈ ಮಾದರಿಯದು. ಜನರು ಪಂತರಿಗೆ ಇದನ್ನು ಹೇಳಿದ್ದಾರೆ. ಪಂತರು ಕೈಮುಗಿದು, ಮುಗುಳು ನಗೆ ನಕ್ಕಿದ್ದಾರೆ. ಅಷ್ಟೇ ಅವರ ಮಾತಿಗೆ ಪಂತರ ಉತ್ತರ. ರಾಜವೈಭವದ ಜೀವನವನ್ನು ನಡೆಸುತ್ತಿರುವ ಜೀವನದ ಪಲ್ಲವಿ.

ಬಾಳನಿಗೆ ಹನ್ನೆರಡು ಹದಿಮೂರು ವರುಷ ಶಹರಿನಲ್ಲಿ ಇಟ್ಟು ವಿದ್ಯೆ ಕಲಿಸಿದರು. ಊರಲ್ಲಿದ್ದಾಗ ಬಾಳ, ಅವರ ನರ್ಮದಾಕಾಕೂನ ಅಂಗೈಯಲ್ಲಿ ಬೆಳೆದಿದ್ದ. ಅವನು ಶಹರಿಗೆ ಹೋದ ಮೇಲೆ ಖಾನಾವಳಿಯ ಊಟ ಅಭ್ಯಾಸದ ಸಾಧನೆಗೆ ತೊಡಕಾಗಬಾರದೆಂದು, ನಿತ್ಯ ಮೋಟಾರಿಗೆ ಡಬ್ಬಿ ಕಳಿಸುತ್ತಿದ್ದರು. ಬಾಳ ಮ್ಯಾಟ್ರಿಕ್ ಮುಗಿಸಿ ಪುಣೆಗೆ ಹೋದ. ಎಮ್. ಎಸ್ ಸಿ. ಆಗುವತನಕ ಆರೆಂಟು ವರುಷ ಗತಿಯೇ ಇರಲಿಲ್ಲ. ಅವನೂ ಪಂತರ ಗರಡಿಯಲ್ಲಿ ಸಾಧನೆ ಮಾಡಿದವ. ಸ್ಕಾಲರಶಿಪ್, ಫ್ರೀಶಿಪ್, ಶಿಕೋಣಿ ಎಲ್ಲಾ

ದಾರಿಯಲ್ಲೂ ಶ್ರಮಿಸಿ, ಪಂತರಿಗೆ ಹೊರದ ಭಾರವಾಗಿ ಕೀರ್ತಿ ಬರುವ ರೀತಿಯಲ್ಲಿ ಪಾಸಾಗಿದ್ದ.

ಮ್ಯಾಟ್ರಿಕ್ ಆಗುವತನಕ, ನಂತರ ಎಮ್. ಎಸ್ಸಿ. ಮುಗಿಯುವ ತನಕ ಬಾಳ, ಈ ಹದಿಮೂರು ಹದಿನಾಲ್ಕು ವರುಷ ಅಖಂಡ ವನವಾಸ-ಉಪವಾಸ ಭೋಗಿಸಿದ್ದಾನೆ. ಮ್ಯಾಟ್ರಿಕ್ ಆಗುವತನಕ ಊಟಕ್ಕೆ ಊರಿನಿಂದ ನಿತ್ಯ ಒಂದು ಹೊತ್ತು ಡಬ್ಬಿ ಬರುತ್ತಿತ್ತು. ಸರ್ಮದಾಕಾಕೂನ ಕೈಯ ಅಂತಃಕರಣದ ಚಟ್ಟಣಿ ಭಕ್ಕರಿ ಬಂದರೆ, ಅದನ್ನೇ ಅಮೃತಸಮವಾಗಿ ಭಾವಿಸಿ, ಬಾಳ, ಎರಡೂ ಹೊತ್ತಿಗೂ ಮಿಗುವಂತೆ ಉಳಿಸಿ, ಉಂಡು ಶಾಲೆ ಕಲಿತ. ನೀರು ಕಾಸಿಕೊಳ್ಳುವ ಭಾನಗಡಿಯಲ್ಲಿ ಎಂದೂ ಬೀಳಲಿಲ್ಲ. ಮಳೆ-ಗಾಳಿ ಬಿಸಿಲು ಯಾವ ಋತುಮಾನ ಬಂದು ಸರಿದು ಹೋದರೂ, ಬಾಳನಿಗೆ ನಳದ ತಣ್ಣೀರಿನ ಸ್ನಾನವೇ. ಮೂರು ರೂಪಾಯಿಯ ಒಂದು ಗುಬ್ಬಿಯ ಗೂಡಿನಷ್ಟು ಸಣ್ಣದಾದ ಕೋಣೆ, ಮಿಣಮಿಣಕು ಕಂದೀಲು. ಇಲ್ಲಿ ಏಳು ವರುಷ ತೆಗೆದ. ಗರಡೀ ಸಾಧನೆಯಲ್ಲಿ ಮೈ-ಮನ ಎರಡೂ ಸುರಿಗೊಂಡವು. ಕಾಲೇಜಿಗೆ ಹೋದ ಮೇಲೆ ಪುಣೆಯಲ್ಲಿಯೂ ಇದೇ ವ್ರತ ತೊಟ್ಟ. ಊರು ಎರಡುನೂರು ಮೈಲಿನ ಅಂತದಲ್ಲಿದೆ. ಡಬ್ಬಿ ಊಟಕ್ಕೆ ಹೇಗೆ ಬಂದೀತು? ಬಾಳ, ಒಂದು ಇದ್ದಲಿ ಒಲೆ ಮಾಡಿದ. ಮುಂಜಾನೆ ನಾಲ್ಕು ಚಪಾತಿ, ಏನು ಸಿಕ್ಕಿತು ಆದರ ಪಲ್ಯ ಮಾಡಿದನೆಂದರೆ ತೀರಿತು. ಮತ್ತೆ ಮರುದಿನವೇ ಒಲೆ ಹೊತ್ತುವದು.

ಪಂತರು ಕಳಿಸುವ ಹಣ, ಅವನ ಸ್ಕಾಲರಶಿಪ್ ಶಿಕೋಣಿಯ ಹಣ ಕೂಡಿ ಅವನಿಗೆ ಖಾನಾವಳಿಯಲ್ಲಿ ಉಂಡು ತಿಂದು ಇರುವಷ್ಟಕ್ಕೆ ಸಾಕಾಗ ಬಹುದಾಗಿತ್ತು. ಆದರೆ ಬಾಳನಿಗೆ, ಊರಲ್ಲಿಯ, ಪಂತರ-ಸರ್ಮದಾಕಾಕೂನ ಒಂದೇ ಧ್ಯಾನ. ಅವರು ಹೊಟ್ಟೆ ಸುಟ್ಟುಕೊಂಡು, ಮೈ-ಮಾನ ಮುಚ್ಚ ಲಿಕ್ಕೆ, ಅಷ್ಟು, ಎಂಥದೆಂದರೆ ಅಂಥ ಅರಿವೆ ತೊಟ್ಟುಕೊಂಡು ಇದ್ದು ಬಿದ್ದು ದನ್ನು ತನಗೆ ಕಳಿಸುತ್ತಾರೆ. ಆ ಋಣ ತೀರಿಸಬರದು. ಅದನ್ನು ತೀರಿಸುವ ಒಂದೇ ಮಾರ್ಗವೆಂದರೆ ತಾನು ಓದಬೇಕು—ಅಭ್ಯಾಸ ಮಾಡಬೇಕು—ಪಾಸಾಗಬೇಕು–ಕೀರ್ತಿ ತರುವಂತೆ ಪಾಸಾಗಬೇಕು. ಎಷ್ಟು ಸಾಧ್ಯ ಅಷ್ಟು ಶ್ರಮಿಸಿ ಬಡತನದಲ್ಲಿ ಜೀವನ ಕಂಠಿಸಬೇಕು. ಪಂತರಿಗೆ ಹೊರದ ಭಾರವಾದ ಎನಿಸಿರಬಾರದು-ಇದೇ ಒಂದು ಧ್ಯಾಸ ಬಾಳನಿಗೆ.

ಪಂತರು ಅವನಿಗೆ, ಹೀಗಲ್ಲ ಹೀಗೆ, ಎಂದು ಎಂದೂ ಹೇಳಿರಲಿಲ್ಲ. ಅವರ, ನರ್ಮದಾಕಾಕೂನ ಜೀವನರೀತಿಯೇ ಸ್ವಯಂವೇದ್ಯವಾಗಿತ್ತು. ಬಾಳ ಅದನ್ನು ನೋಡಿಯೇ ತನ್ನ ಜೀವನವನ್ನು ತಿದ್ದುತ್ತಿದ್ದ-ತೀಡುತ್ತಿದ್ದ. ಬಾಳ, ಕಚ್ಚಾ ಗುರುವಿನ ಚೇಲಾ ಅಲ್ಲ.

ಬಾಳ ಈಗ ಮುಂಬೈಯಲ್ಲಿ ಪ್ರಖ್ಯಾತ ಔಷಧ ಕಂಪನಿಯಲ್ಲಿ ನಾಕಾರು ನೂರು ರೂಪಾಯಿಯ ಸಂಬಳದ ಹುದ್ದೆಯಲ್ಲಿದ್ದಾನೆ. ಹಿಂದೆ ಪಂತರು ಕಳುಸುತ್ತಿದ್ದ ತಿಟಿಮಿಟಿ ಹಣದಲ್ಲಿಯೇ ಕಾಲು ತಲೆಕಡಿದು, ರೂಪಾಯಿ ಎಂಟಾಣೆ ಉಳಿಸಿ-ಉಳಿಸಿ ಅದನ್ನು ಪೋಸ್ಟಿನಲ್ಲಿ ಜಮಾ ಮಾಡಿ, ನೂರ-ನ್ನೂರರ ಅಂಕಿಯ ವರೆಗೂ ಒಯ್ದಿದ್ದ. ಪಂತರು ಯಾವಾಗಲೋ ಒಮ್ಮೆ ಅವನ ಪಾಸ ಬುಕ್ಕು ನೋಡಿವರು. ತಟತಟ ನಾಕು ಹನಿ ಕಂಣೀರುದುರಿಸಿ ದರು. ಅದು ಧನ್ಯತೆ ಎನಿಸಿದ ಜೀವನದ ಆನಂದಾಶ್ರು. ಅಂತಃಕರಣದಿಂದ ಚಿಮ್ಮಿದ ಆ ಅಭಿಮಾನ ಅವರ್ಣನೀಯ.

ಬಾಳ ಮೊದಲನೇ ಸಂಬಳವಾದ ಮೇಲೆ, ತಾನು ಕೂಡಿಸಿಟ್ಟ ಹಣಕ್ಕೆ ಇನ್ನಿಷ್ಟು ಭರತಿ ಹಾಕಿ, ತಾಯಿಗೆ—ನರ್ಮದಾಕಾಕೂನಿಗೆ ಬಂಗಾರದ ಎರಡೆರಡು ಬಳೆ ಮಾಡಿಸಿದ. ಅದನ್ನು ಅವನು ತಾಯಿಗೆ ಅರ್ಪಿಸಿದ ದಿನ ಪಂತರು ಉಕ್ಕಿ ಬಂದ ದುಃಖವನ್ನು—ಆನಂದವನ್ನು ವ್ಯಕ್ತಪಡಿಸಲು ಒಂದೇ ಪವಿತ್ರ ಸ್ಥಾನವನ್ನು ಹುಡುಕಿಕೊಂಡು ಹೋದರು. ಅಡುಗೆಯ ಮನೆ ಯಲ್ಲಿಯ ದೇವರ ಕಟ್ಟೆಯ ಎದುರು ನಿಂತು, ನತಶಿರರಾಗಿ—ಕೈ ಜೋಡಿಸಿ ಮೂಕರಾಗಿ, ಅಶ್ರುನಯನರಾಗಿ ದೇವರಿಗೆ ನಿವೇದಿಸುತ್ತಿದ್ದರು. ಪಂತರ ನಿವೇದನೆ-ಪರಮಾತ್ಮನ ಸಾಂತ್ವನ ಅವರಿಬ್ಬರಿಗೇ ಅರ್ಥವಾಗಬೇಕು; ನಮಗಲ್ಲ.

ಪಂತರ ಶಿಷ್ಯಸಮೂಹ ದೊಡ್ಡದಿದೆ. ಯಾರೂ ಅವರನ್ನು ಮರೆತಿಲ್ಲ. ಮರೆಯುವಂತೆಯೂ ಇಲ್ಲ. ಪಂತರಿಗೆ ಪ್ರತಿ ಶಿಷ್ಯನಲ್ಲಿ 'ಬಾಳ' ಕಾಣಿಸಿ ದ್ದಾನೆ. ಅವರಲ್ಲಿ ಯಾವನೋ ಒಬ್ಬ ಡಾಕ್ಟರನಾದ, ಇನ್ನೊಬ್ಬ ವಕೀಲ ನಾದ, ಮಗದೊಬ್ಬ ಮಾಮಲೇದಾರನಾದ. ಇಂಥ ಸುದ್ದಿಯನ್ನು ಪಂತರು ಕೇಳಿದ ದಿನ, ದೇವರೆದುರು ತುಪ್ಪದ ದೀಪ ಹಚ್ಚುತ್ತಾರೆ. ನತಶಿರರಾಗಿ,

ಕೈಜೋಡಿಸಿ ಆ ಶಿಷ್ಯನ ಉದ್ದಂಡ ಆಯುಷ್ಯದ ಕ್ಷೇಮಚಿಂತನೆಯನ್ನು ಶ್ರೀಹರಿಗೆ ನಿವೇದಿಸುತ್ತಾರೆ.

ಮುಲ್ಕೀಪರೀಕ್ಷೆಯ ಪರಿಣಾಮ ಶೇಕಡ ಪ್ರಮಾಣದಲ್ಲಿ ಆಗುವದರ ಕಾರಣ ಇದೇ—ಅವರ "ಬಾಳನ" ಸರ್ವವ್ಯಾಪಕತ್ವ.

ಕನ್ನಡ ಶಾಲೆಯಲ್ಲಿಯ ಈ ಪಂತೋಜಿಯವರ ಮಗ ಬಾಳನಿಗೆ, ಕಾಲೇಜಿನಲ್ಲಿಯ ಇನ್ನೊಬ್ಬ ದೊಡ್ಡ ಪಂತೋಜಿ, ತಮ್ಮ ಕನ್ಯೆಯನ್ನು ಧಾರೆ ಎರೆದುಕೊಟ್ಟರು. ಪಂತ ಮಾಸ್ತರರ ಸೊಸೆ "ಸೋನಾ" ರತ್ನದಂತಹ ಹುಡುಗಿ. ಅವಳನ್ನು ತೋರಿಸಲಿಕ್ಕೆ ಬಂದಾಗಲೇ ನರ್ಮದಾಕಾಕೂ ಹೇಳಿದರು: ಸೋನಾ ಬಾಳನಿಗೆ ಅನುರೂಪ ಕನ್ಯೆ ಎಂದು. ಪಂತರು ಅಸ್ತು ಎಂದರು. ಕಾಲೇಜಿನಲ್ಲಿಯ ಪ್ರೊಫೆಸರರು, ಪಂತರ ವರದಕ್ಷಿಣೆಯ ಅಂಕಿ ತಮ್ಮ ಗಂಟಲಲ್ಲಿ ಇಳಿಯದ ತುತ್ತಾದೀತೆಂದು ಭಾವಿಸಿದ್ದರು. ಎಮ್. ಎಸ್‌ಸೀ ಪ್ರಥಮ ವರ್ಗದಲ್ಲಿ ಪಾಸಾದ, ಸುರೂಪ ಹುಡುಗ. ಏನಿಲ್ಲೆಂದರೂ ಐದು ಸಾವಿರದ ಮೇಲೆ ಅಂಕಿ ಹಾರೀತೆಂದು ಅವರು ಅಳುಕಿದ್ದರು. ಧಾರವಾಡದ ವಕೀಲರೊಬ್ಬರು ತಮ್ಮ ತಿಜೋರಿಯ ಬಾಗಿಲು ತೆರೆದು ವರದಕ್ಷಿಣೆಯ ವೈಭವ ಪ್ರದರ್ಶನ ನಡೆಸಿದ್ದರು.

ಪಂತರು ಅಗದಿ ಸುದಾಮನ ಒಕ್ಕಲು. ಕೊಡುವ ದಾನಿ ಕೃಷ್ಣ ವರದ ಹಸ್ತವೆತ್ತಿ "ಕಾಮಧೇನು ಕಲ್ಪವೃಕ್ಷ ಏನು ಬೇಕು ಬೇಡಿಕೋ" ಎಂದು ಅಂಗಲಾಚುತ್ತಿದ್ದರೂ "ಶ್ರೀಹರೀ ಒಂದೇ ಒಂದು ತುಳಸೀ ದಳ ಸಾಕು" ಎಂದು ತಮ್ಮ ನಾಮರ್ದತನವನ್ನು ತೋರಿಸಿದರು. ಇದು ಜನರಾಡಿಕೊಂಡು ನಕ್ಕ ಮಾತು. ನಮ್ಮದಲ್ಲ.

ಪಂತರು, ಪ್ರೊಫೆಸರ ಸಾಹೇಬರಿಗೆ, ತಮ್ಮ ನೇಹಮೀ ರೀತಿಯಲ್ಲಿ ನತಶಿರರಾಗಿ, ಕೈಜೋಡಿಸಿ ಹೇಳಿದರು: "ಕೊಡುವ ಯೋಗ್ಯತೆಯನ್ನು ದೇವರು ತಮಗೆ ಕೊಟ್ಟಿದ್ದಾನೆ; ಆನಂದ. ಆದರೆ ಪಡೆಯುವ ಯೋಗ್ಯತೆ–ಶಕ್ತಿ ನನ್ನಲ್ಲಿಲ್ಲ. ನಾನು ಬಡ ಶಾಲಾಮಾಸ್ತರ. ಕಾಯೀ—ಕನ್ಯೆ ಅಷ್ಟೇ. ನನ್ನ ಯೋಗ್ಯತೆ. ತಾವು ಅನುಗ್ರಹಿಸಿದರೆ ಆಯಿತು. ನಾನು ಧನ್ಯ."

ಪ್ರೊಫೆಸರ ಸಾಹೇಬರು ತಾವು ಬಹಳ ಕಲಿತದ್ದು ವ್ಯರ್ಥವಾಯಿತೆಂದು ಹಳಹಳಿಸಿದರು.

ಸೋನಾ ವಿಜೃಂಭಣೆಯಿಂದಲೇ ಪಂತಮಾಸ್ತರರ ಸೊಸೆಯಾಗಿ, ಮನೆ ತುಂಬಿಸಿಕೊಳ್ಳಲೆಂದು ಮುಂದೆ ಎಂಟೇ ದಿನಗಳಲ್ಲಿ ಪಂತರ ಮನೆಯನ್ನು ಬೆಳಗಬಂದಳು.

ಪಂತರು ರಾಜವೈಭವವನ್ನು ಅನುಭೋಗಿಸುವ ಅಮೋಘ ಸಂಧಿಯನ್ನು ತಮ್ಮ ಭೋಳೇತನದಿಂದ, ಮೂರ್ಖತನದಿಂದ ಕಳೆದುಕೊಂಡರೆಂದು ಊರವರು ಹಳಹಳಿಸಿದರು. ಪಂತರಿಗೆ, ತಮ್ಮ ಹೆಂಡತಿ ಮಗ ಮನವಾರೆ ಒಪ್ಪಿದ ಲಕ್ಷ್ಮಿ ಮನೆಗೆ ಬಂದಳು. ಅಷ್ಟೇ, ಅದೇ ಧನ್ಯತೆ. ಆ ಲಕ್ಷ್ಮಿ ಬಂದಿದ್ದರೆ, ಈ ಬಡವನ ಮನೆಯಲ್ಲಿ ಅವಳನ್ನು ಆದರಿಸಿ ಕೂಡಿಸಲಿಕ್ಕೆ ಒಂದು ಮುರುಕು ಮಣೆಯೂ ಹೊತ್ತಿಗೆ ಕೈಗೆ ಹತ್ತುತ್ತಿರಲಿಲ್ಲ. ಅಸ್ಥಾನದಲ್ಲಿ ಅವಳು ಆಗಮಿಸಲಿಲ್ಲ. ಯೋಗ್ಯ ಸನ್ಮಾನವಾಗಲಿಲ್ಲವೆಂದು ಪರಿತಪಿಸುವ ಪಾಳಿ ತಪ್ಪಿತು, ಅಷ್ಟೇ ಧನ್ಯತೆ ತಮಗೆ, ಎಂದರು ಪಂತರು.

ಇಂಥವರು ನಮ್ಮ ಪಂತ ಮಾಸ್ತರರು; ಥೇಟ ಸಂತ ತುಕೋಬಾ.

ಮೊನ್ನೆ ಬಾಳನ ಕಾಗದ ಬಂತು ಪಂತರಿಗೆ. ಆಣೆ-ಚೂರೆ ಹಾಕಿ ಆಗ್ರಹಪಡಿಸಿ ಬರೆದಿದ್ದ—ಹತ್ತೆಂಟು ದಿನ ಮುಂಬೈಗೆ ಬಂದು ಹೋಗಬೇಕೆಂದು. ನರ್ಮದಾಕಾಕೂ ಎಷ್ಟಾದರೂ ಹೆಂಣು-ಹೆಂಗಸು. ಸೊಸೆ-ಮಗನ ತುಂಬಿದ ಸಂಸಾರ ನೋಡುವ ಅಮಿತ ಆಶೆ-ಹಂಬಲ ಅವರಿಗಿರುವದು ಸಹಜ. ಅವರೂ ಪಂತರನ್ನು ಆಗ್ರಹಪಡಿಸಿದರು. ಸೊಸೆಯೂ ಬರೆದಿದ್ದಳು. ಪಂತರು ಎರಡು ದಿನ ವಿಚಾರಮಾಡಿದರು. ಮುಲ್ಕೀ ಪರೀಕ್ಷೆಯ ಕ್ಲಾಸಿನ ಜವಾಬುದಾರಿಯನ್ನು ಎದುರು ನಿಲ್ಲಿಸಿಕೊಂಡರು. ಈ ಸಾರೆ ಹದಿನೈದು ಹುಡುಗರು ಪರೀಕ್ಷೆಗೆ ಹೋಗುವವರು. ತಾವು ಹತ್ತೆಂಟು ದಿನ ಊರಿಗೆ ಹೋದರೆ ಹುಡುಗರ ಅಭ್ಯಾಸದ ಗತಿ ಏನು ? ರೆಕಾರ್ಡಿನ ಗತಿಯೇನು ? ಹದಿನೈದು ಹುಡುಗರಲ್ಲಿ ಒಬ್ಬನೇ ನಪಾಸಾಗಲಿ ತಮಗೆ ಎಂಥ ದಾರುಣ ವ್ಯಥೆಯೆಂದು ಚಿಂತಿಸಿದರು. ಮೇ ತಿಂಗಳ ಬೇಸಿಗೆಯ ಬಿಡುವೇನೋ ಇದೆ. ಅದು ನಿಜ. ಆದರೆ ಸೂಟಿಯಲ್ಲೇ ಖರೆ ಅಭ್ಯಾಸವಾಗುತ್ತಿದೆ. ಹಿಂದಿನ ಉಜಳಣಿ, ಮುಂದಿನ ತಯಾರಿ. ತಾಸು ಹೆಚ್ಚು-ತಾಸು ಕಡಿಮೆ ಕುಳಿತು ಹುಡುಗರನ್ನು ತಿದ್ದಿತೀಡಲಿಕ್ಕೆ ಬರುತ್ತದೆ. ಇನ್ನೆಷ್ಟು ದಿನ ಈ ತಿದ್ದಿತೀಡುವ ಸಾಧನೆ? ಕೇವಲ ಎರಡೇ ವರ್ಷ. ಪೆನ್‌ಶನ್ ಆದ ಮೇಲೆ

ತಮಗೆ ಶಾಲೆಗೆ ಸಂಬಂಧ ಉಳಿಯುವದಿಲ್ಲ, ನಿಜ. ಆದರೂ ಕಡೆಯ ಈ ಎರಡು ವರ್ಷ ರೆಕಾರ್ಡ ಶುಭ್ರವಾಗಿ ಉಳಿದುಬಿಟ್ಟರೆ, ಮೂರು ದಶಕವ ತಪಸ್ಸಿಗೆ ವರದಾನವಾದ ಧನ್ಯತೆ ಇರುತ್ತಿದೆ. ಈ ಧನ್ಯತೆ, ಈ ಸಂತಸ- ಈ ಸಮಾಧಾನ ಅಖಂಡ ಜೀವಮಾನದುದ್ದಕ್ಕೂ ತಮಗೆ ದಾರಿ ದೀಪವಾದಂತಾಗುತ್ತದೆ.

ಪಂತರು ಹೊಯ್ದಾಟದಲ್ಲಿರುವಾಗಲೇ ಬಾಳನಿಂದ, ಸೋನಾನಿಂದ ಮತ್ತೆ ಕಾಗದ ಬಂದವು. ನರ್ಮದಾಕಾಕೂ ಹಾಸಿಗೆಯನ್ನೇ ಕಟ್ಟಿದರು. ಪಂತರು ಮಗನ, ಸೊಸೆಯ–ಹೆಂಡತಿಯ ಬಯಕೆಗೆ ನಕಾರ ಹೇಳಲು ಹಿಂಜರಿದರು. "ಆಯಿತು, ಎಂಟು ದಿನ ಹೋಗಿ ಬರೋಣ, ಅವರಿಗೂ ಅಷ್ಟೇ ಸಮಾಧಾನ. ನಾನು ಬರೇ ನನ್ನ ಸಮಾಧಾನವನ್ನು ನೋಡುವದೂ ತಪ್ಪು" ಎಂದು ತಾವು ತಪ್ಪು ಮಾಡಿದ್ದೇವೆಂದು ಭಾವಿಸಿದ್ದ ತಪ್ಪನ್ನು ತಿದ್ದಿಕೊಂಡರು.

ಪಂತರು ಎಂಟು ದಿನ ಮುಂಬೈಗೆ ಹೋಗುತ್ತಾರೆ—ಮಗನ ಕಡೆಗೆ. ಈ ನ ಭೂತೋ ನ ಭವಿಷ್ಯತಿ ವಾರ್ತೆಯ ಹೊಸಗಾಳಿ ಊರಲ್ಲಿ ಬೀಸಿತು. ಎಲ್ಲರೂ ವಿಸ್ಮಯಚಕಿತರೆ! "ಇದೇನ ಪಂತಮಾಸ್ತರ, ಆಂ" ಕರಪಲ್ಲವಿ. ನೇತ್ರಪಲ್ಲವಿಯ ಚಮತ್ಕಾರ ಹುಡುಗರಿಂದ ಮುಮುಕರ ವರೆಗೆ ನಡೆಯಿತು.

ಕಾದ ಹಾರಿಯ ಬಾಯಿಗೆ ನೀರುಣಿಸುವದನ್ನು ಮರೆತು, ಕಮ್ಮಾರ ರಾಚನೂ ಕೇಳುವವನೆ; ಗಾಡಿಯ ಚಾಕು ಕೂಡಿಸುವದನ್ನು ಮರೆತು ಬಡಿಗರ ಘೂಳಪ್ಪನೂ ಕೇಳುವವನೇ; ಕಿರಾಣೀ ಅಂಗಡಿಯ ಕಲ್ಲಪ್ಪ, ಎಂಣಿ ಅಳಿದು ಸೀಸೆಗೆ ಸುರುವುವದನ್ನು ಬಿಟ್ಟು "ಆಂ" ಎಂದು ಬಾಯ್ತೆರೆದನೇ! ಅದೇಕೆ ಬಾಗವಾನರ ಕುಲಸೂಮಾ, ಉಳ್ಳಾಗಡ್ಡೆ ತೂಗುತ್ತಿದ್ದಾಕೆ ತಕ್ಕಡಿಯನ್ನು ತ್ರಿಶಂಕುವಾಗಿ ಹಿಡಿದು ಸ್ತಂಭಿತಳಾದಂತೆ ದಂಗುಬಡಿದವಳೇ! "ಪಂತ ಮಾಸ್ತರ, ಎಂಟದಿನಾ ಊರಿಗೆ ಹೋಕ್ಕಾರಂತಃ."

ಈ ವಾರ್ತೆಯನ್ನು ಖಚಿತಮಾಡಿಕೊಂಡಂತೆಯೂ ಆಯಿತು, ಏನೋ ಅಡಚಣಿ ಇದ್ದರೆ ಅಷ್ಟು ಲಾವಣೀ ರೂಪಾಯಿ ಆಗಾವು ಕೊಟ್ಟಂತೆಯೂ ಆಯಿತು ಎಂದು ಖುದ್ದ ರಾಮನಗೌಡರೇ ಪಂತರ ಮನೆಗೆ ಬಂದು ಕೇಳಿದರು:"ಮಾಸ್ತರ, ಎಂಟ ದಿನಾ ಮುಂಬೈಗೆ ಹೋಗಾವ್ರಂತಃ, ಬಾಳನಕಡೇ,

ಠೀಕಾತು. ಅಂವಗೂ ಆಟ ಸಮಾಧಾನಾ. ಹೋಗಿ ಬರ್ರೀ. ಏನರ ಅಡ ಚಣೀ ಪಿಡಚಣೀ ಐತೇನ ಮತ್ತ? ಹಾಂಗಿದ್ದರ ಹೇಳ್ರೀ."

"ಛೇ ಛೇ ಗೌಡರ, ಅದೇನ ಇಲ್ಲಾ. ಹೋಗಲ್ಯೋ ಬ್ಯಾಡೋ ಅನ್ನೊ ವಿಚಾರದಾಗ ಇದ್ದೆ ಅಷ್ಟೇ!" ಪಂತರು ಸಾಲೆ ಮುಳುಗೀತೆಂಬ ವಿಚಾರವನ್ನು ಮರೆಮಾಡುತ್ತ ಹೇಳಿದರು.

"ಅದೇನ ಮೀನಾಮೇಷಾ ಮಾಡಕೋತ ಕುಂಡರಬ್ಯಾಡ್ರೀ. ಝಟ್ಟನೆ ಹೋಗಿ ಬರ್ರಿ. ಫಳಸೂ-ಫಸ್ತರಸೂ ಮಗಾ. ಅಂಗಲಾಚಿ ಕರೀ ತಾನ. ಇಲ್ಲ ಅನಬಾರದು. ಕಲಿಸಿದಿರಿ, ಮುಂದ ತಂದ್ರೀ, ಬಾಳಗೂ ಆಟ ಆಶಾ ಇರೂದೇನಲಾ, ತನ್ನ ಅವ್ವಾ-ಅಪ್ಪಾ, ತನ್ನ ಸುಖಾ ನೋಡಲೀ ಅನ್ನೂದು. ಪಂತ ಮಾಸ್ತರರಿಗೆ, ನಾವ್ ತಿಳಿಸಿ ಹೇಳೂದೇನು ಇಂಥಾ ಮಾತಾ.''

ಅಂತೂ ಪಂತಮಾಸ್ತರರು ಗೌಡರ ಮಾತು ಮನ್ನಿಸಿದರು. ತಮ್ಮ ಬಾಳ ನಿಗೆ ತಿಳಿಸಿದರು—ಇಂಥ ದಿನ ಬರುತ್ತೇವೆ, ಸ್ಟೇಶನ್ನಿಗೆ ಬಂದಿರು ಎಂದು.

ಇಪ್ಪತ್ತೈದು ವರುಷದ ಕಾಲಖಂಡದಲ್ಲಿ ಊರು ಬಿಟ್ಟು ಅಗಲದ ಪಂತರು ಎಂಟುದಿನ ಊರುಬಿಡುವ ನಿರ್ಧಾರ ಮಾಡಿದರು. ಇಪ್ಪತ್ತೈದು ವರುಷದ ನಂತರ ಮತ್ತೆ ಮೋಟಾರು ಉಗೆಬಂಡಿ ಹತ್ತಲಿದ್ದರು—ವಿಶಾಲ ವಿಶ್ವವನ್ನು ನೋಡಲಿದ್ದರು. ಅವರ ಬಾಳ, ಪಂತರಿಗೆ ಪ್ರಾಂತದ ರಾಜಧಾನಿ ತೋರಿಸಲಿದ್ದ. ಮುಂಬೈಯ ವಿರಾಟ್ ನಗರ, ಅದರಲ್ಲಿಯ ವೈಚಿತ್ರ್ಯ—ಸಿನೇಮಾ ನಾಟಕ-ಟ್ರಾಮ-ವಿಮಾನ ತೋರಿಸಲಿದ್ದ. ಪಂತರು ಕಡಕ್ ಇಸ್ತ್ರಿಯ-ಪರೀಟ ಘಡಿಯ ವಸ್ತ್ರ-ವಿಭೂಷಿತರಾಗಿ ಎಂಟು ದಿನ ಮುಂಬೈಯಲ್ಲಿ, ಮೋಟಾರೆಂದರೆ ಮೋಟಾರು, ಬಗಿಯೆಂದರೆ ಬಗಿ, ಟ್ರಾಮ್ ಎಂದರೆ ಟ್ರಾಮ್ ವಾಹನ ರಥಿಕರಾಗಿ ಅಡ್ಡಾಡಲಿದ್ದರು. ಊದುಕೊಳವಿಯಲ್ಲಿ ಕಡ್ಡಿ ಆರು-ಪಾರಾಗಿ ಹೋಗುವಂತೆ ಬೋಗದೆಯಲ್ಲಿ ಅಗ್ಗಿನಗಾಡಿ ಹೋಗುವದನ್ನು ಬರೇ ನೋಡಲಿದ್ದರಲ್ಲ, ಅದರಲ್ಲಿ ಕುಳಿತು ಅನುಭವಿಸಲಿದ್ದರು. ಬೋರೀ ಬಂದರ ಸ್ಟೇಶನ್, ರಾಣೀ ಬಗೀಚಾ, ಚೌಪಾಟಿಯ ಮೇಲಿನ ದಿ. ಲೋ. ಮಾ. ಬಾ. ಗಂ. ಟಿಳಕರ ಶಿಲಾಪ್ರತಿಮೆ—ಎಲ್ಲಕ್ಕೂ ಅದ್ಭುತವೆಂದರೆ ಭೂಗೋಲ ಪಾಠಕಲಿಸುವಾಗ ಹಿಂದುಸ್ತಾನ ಮೇರೆಯನ್ನು ವೇಷ್ಟಿಸಿದ ಅರಬೀಸಮುದ್ರದ

ಬಗ್ಗೆ ಹುಡುಗರಿಗೆ ಹೇಳಿ ಗೊತ್ತಿತ್ತು ತಮಗೆ, ಅದನ್ನು ಇಂದು ಪ್ರತ್ಯಕ್ಷವಾಗಿ ನೋಡಲಿದ್ದಾರೆ. ರತ್ನಾಕರನ ವೈಭವವನ್ನು ಕಂಣಾರೆ ಕಾಣಲಿದ್ದಾರೆ.

ಧನ್ಯ ಪಂತ ಮಾಸ್ತರರ ದೈವ. ಊರಿಗೆ ಹೊರಡುವಾಗ ದೇವರೆದುರು ಕೈಮುಗಿದು, ನತಶಿರರಾದಾಗ, ಅವರೂ ಅದೇ ಮಾತನ್ನೇ ಅಂದಿದ್ದಾರೆ.

* * * * *

ಪಂತ ಮಾಸ್ತರರು ಮುಂಬೈಗೆ ಮೊನ್ನೆಯೇ ಹೋದರು. ಅವರೂ ಊರಲ್ಲಿಯ ಚರ್ಚೆ ನಿಂತಿಲ್ಲ.

"ಮಾಸ್ತರ ನಿನ್ನೆ ಹೋದರಲ್ಲಃ ?"

"ಮಾಸ್ತರ ಮಂಗಳವಾರ ದಿನಾ ಹೋದ್ರು—ಹೌಂದಲ್ಲಃ ?"

"ಮಾಸ್ತರ ಹೋಗಿ ನಾಕ ದಿನಾ ಆಗತಃ ಬಂತಲ್ಲಃ ?"

ರತನ್ ಶೇಡಜಿಯ ಗಡಿಯಾರ ಮೊನ್ನೆಯೇ ಬಂದು ಬಿದ್ದಿದೆ. ರೇಡಿಯೋ ಟಾಯಿಮ್ ನೋಡದೆ ಅದನ್ನು ಸರಿಪಡಿಸುವಂತಿಲ್ಲವೆಂದು ಅವನು ಅದನ್ನು ಬಂದೇ ಇಟ್ಟಿದ್ದಾನೆ.

ಊರಲ್ಲಿಯ ಅತ್ಯಂತ ನಿರುಪದ್ರವಿ-ನಿರ್ಲಿಪ್ತ ಪ್ರಾಣಿ ಪಂತಮಾಸ್ತರರು ನಾಕು ದಿನ ಊರುಬಿಟ್ಟರೆ ಇಷ್ಟು ಗೊಂದಲ-ಇಷ್ಟು ಚರ್ಚೆ. ಎಲ್ಲಾ ರಿಕಾಮು ಚೋಟರ ವ್ಯವಹಾರ.

* * * * *

ಪಂತರು ಚುಮು ಚುಮು ನಸುಕಿರುವಾಗಲೇ ದಾದರ ಸ್ಟೇಶನ್ನಿನಲ್ಲಿ ಇಳಿದಿದ್ದರು. ಟ್ಯಾಕ್ಸಿಯಲ್ಲಿ ಕುಳಿತು ಮನೆಗೆ ಹೋಗಹೋಗುತ್ತ ಮುಂಬ ಯಿಯ ಮಹಾ ವಿಭವ ನೋಡಿದ್ದರು. ಬೀದಿ ಇನ್ನೂ ಅಷ್ಟು ಗಜಿಬಿಜಿಸಿರ ಲಿಲ್ಲ. ಮಗ್ಗದಲ್ಲಿಯ ಲಾಳಿಯಂತೆ ಸರಸರನೆ ಹರಿದಾಡುವ, ಮೋಟಾರು ಟ್ರಾಮು-ಬಸ್ಸಿನ ಗದ್ದಲ ಇನ್ನೂ ಅಷ್ಟಾಗಿ ಕಂಡುಬರುತ್ತಿರಲಿಲ್ಲ. ತಲೆಯ ಮೇಲಿನ ಮುಂಡಾಸವನ್ನು ಒಂದು ಕೈಯಿಂದ ಹಿಡಿದುಕೊಂಡು, ಅದು ಬೀಳದಂತೆ ದಕ್ಷತೆವಹಿಸಿ, ಮೂರು-ನಾಕು ಮಜಲಿನ ಭವ್ಯ ಇಮಾರತು ನೋಡಿದ್ದರು. ಸಂದಿ-ಗೊಂದಿಯಲ್ಲಿ, ಬೀದಿಯ ಅಡ್ಡ-ಉದ್ದದಲ್ಲಿ ಇಂಥ ಬೃಹದ್-ವಾಡೆಗಳು ನಾಯಿಯ ಛತ್ತರಿಗೆಯಂತೆ ಎದ್ದಿದ್ದರೂ ತಮ್ಮ ಬಾಳ

ಮೂರೇ ಕೋಣೆಯ ಒಂದು ಗೂಡಿನಲ್ಲಿರುವದನ್ನು—ಅದಕ್ಕೆ ಎಪ್ಪತ್ತು ರೂಪಾಯಿಯ ಬಾಡಿಗೆಯನ್ನು ಕೊಡಬೇಕಾಗುತ್ತದೆ ಎನ್ನುವದನ್ನು ಕೇಳಿದಾಗ ಪಂತರಿಗೆ ಬವಳಿ ಬರಲಿಲ್ಲ, ಅಷ್ಟೇ ಪುಣ್ಯ. ಎಪ್ಪತ್ತು ರೂಪಾಯಿಯಲ್ಲಿ ತಾವು ಮೂವರೂ ಜೀವನವನ್ನು ಮಂಗಲಮಯ ಮಾಡಿದ್ದರು. ಬೆಳ್ಳಿಯ ರೂಪಾಯಿಗೆ ಹುಣಸೇಪಕ್ಕದ ಬೆಲೆಯೂ ಇಲ್ಲ ಮುಂಬೈಯಲ್ಲಿ—ಎಂದೆನಿಸಿತು ಪಂತರಿಗೆ. ಆಡಿ ತೋರಿಸಲಿಲ್ಲ.

ಹೊತ್ತು ಸರಿದಂತೆ, ಮುಂಬೈ ವಿರಾಟ್ ಸ್ವರೂಪ ತಾಳತೊಡಗಿತು. ಘಟೋತ್ಕಚನ ಮಾಯಾಬಾಜಾರ ಏಳತೊಡಗಿತು. ಮೂರನೇ ಮಜಲಿನಿಂದ, ಕೆಳಗೆ ದೃಷ್ಟಿಚಾಚಿ ನೋಡುವ ತ್ರಾಣ ಪಂತರಲ್ಲಿ ಸಂಪುಷ್ಟಕ್ಕೆ ಬಂದಿತ್ತು. ಜೋಲಿ ಹೋಗದಿರಲೆಂದು ಪಂತರು ಗ್ಯಾಲರಿಯಲ್ಲಿ ಬಾಳನ ಖುರ್ಚಿಯನ್ನು ಹಾಕಿಕೊಂಡು, ಗಟ್ಟಿಯಾಗಿ ಕಟಾಂಜನದ ಕಬ್ಬಿಣ ಸಲಾಕೆ ಹಿಡಿದುಕೊಂಡು, ವಿರಾಟ್ ವೈಭವ ನೋಡಿ ನೋಡಿ, ಕಂಣಪಾರಣೆ ಮಾಡಿಕೊಂಡರು.

ಬಾಳ ಅವರಿಗೆ ಹೇಳಿದ್ದ: "ಕಾಕಾ. ಇನಾ ಹದಿನೈದ ದಿನಾ ಇರಾವ್ರಿದ್ದೀರಿ. ಎಷ್ಟ ನೋಡಿರೀ ಮುಂಬೈ ? ನಿಮಗಽ ಬ್ಯಾಸರ ಬರತ್ಽದ."

ಪಂತರಿಗೆ ಜನಸಾಗರದ, ವಾಹನ ಸಾಗರದ ತೆರೆಯಮೇಲೆ ತೆರೆಯೆದ್ದು ಬಂದು, ಎಲ್ಲಿಯೋ ಲೀನವಾಗುವ ದೃಶ್ಯದ—ಮಹಾ ಗಭೀರತೆಯ ಬೇಸರ ಬರುವ ಶಕ್ಯತೆ ಇರಲಿಲ್ಲ. ತಮ್ಮ ಸಂಣ ಹಳ್ಳಿ—ಅದರಲ್ಲಿಯೂ ಸಾಸಿವೆ ಕಾಳಿನಷ್ಟು ಕ್ಷುದ್ರ ತಮ್ಮ ಜೀವ, ಮುಂಬೈ ಮಹಾಸಾಗರಲ್ಲಿ "ದರಿಯಾಮೇ ಖಸ್‌ಖಸ್" ಎಂದುಕೊಂಡರು. ಹಳ್ಳಿಯಲ್ಲಿಯೂ ಅವನದೇ ಲೀಲೆ. ಇಲ್ಲಿಯೂ ಅವನದೇ ಲೀಲೆ. ಅರಳೆಲೆಯ ಅಂಗೈ ರಂಗದಲ್ಲಿ ಪವಡಿಸಿದ ಬಾಲಲೀಲಾ ಮನೋಹಾರಿಯಾದ ಪರಮಾತ್ಮ—ಬರೇ ಅಂಗುಲ ಅಳತೆಯ ಬಾಯಿತೆರೆದು ವಿಶ್ವರೂಪ ದರ್ಶನ ಮಾಡಿಸಿದ ಭಗವಾನ್ ಶ್ರೀಹರಿ.... ಇಬ್ಬರೂ ಒಂದೇ; ಆದರೆ ಲೀಲೆ ಎಂಥಾ ವಿಚಿತ್ರ ! ಎಂಥ ವೈಭವಪೂರ್ಣ ! ಮುಂಬೈ "ಮೂಕಂಕರೋತಿ ವಾಚಾಲಂ" ಆದರೂ, ಪಂತರು ಮಾತ್ರ ಇಲ್ಲಿ ಬಂದು ತೀರ ಮೂಕರಾದರು. ವಾಚಾಸಾಮರ್ಥ್ಯವನ್ನೇ ಕಳೆದು

ಕೊಂಡು ಬಿಟ್ಟರು. ಮಾತಾಡಿ ಪರಮಾತ್ಮನ ಭವ್ಯತೆಯ ಅಗಾಧ ಲೀಲೆಯ, ಅಮೃತಕ್ಷಣವನ್ನು ಲಘುವಾಗಿಸಬಾರದೆಂದು ತೆಪ್ಪಗಿದ್ದರು.

ಸಂಜೆಯವರೆಗೆ ಹೇಗೋ ವೇಳೆ ಕಳೆದರು. ಕೇಸರೀ ಓದಿದರು. ನವಾಕಾಳ ಓದಿದರು. ಬಾಳ ತಂದಿಟ್ಟ ಒಂದೆರಡು ಮಾಸಿಕ ತಿರುವಿ ಹಾಕಿದರು. ಮತ್ತೆ ಗ್ಯಾಲರಿಯಲ್ಲಿ ಕುರ್ಚಿ ಎಳೆದುಕೊಂಡು ಮುಂಬೈ ದರ್ಶನರತರಾದರು.

ಐದು ಗಂಟೆಯಾಗಬಂದಿತ್ತು. ಎದುರು ಕಟ್ಟಡದ ಮೂರನೇ ಅಂತಸ್ತಿನಲ್ಲಿಯ ಕಿಟಕಿಯಿಂದ ಹುಡುಗರ ಕಲಕಲಾಟ ಕೇಳಿಬಂದಿತು. ಪಂತರು ಕಿವಿ, ಕಂಣು ಅತ್ತ ತಿರುಗಿಸಿದರು. ನೋಡಿದರು....ಪಂತರು ಒಂದೇ ನಿಮಿಷದಲ್ಲಿ ಬದಲಾದರು. ಅವರು ಬಾಳನ ತಂದೆಯಾಗಿರಲಿಲ್ಲ. ನರ್ಮದಾಕಾಕೂನ ಯಜಮಾನರಾಗಿರಲಿಲ್ಲ. ಸೋನಾನ ಪ್ರೀತಿಯ ಮಾಮಂಜಿಯಾಗಿರಲಿಲ್ಲ. ಗ್ಯಾಲರಿಯಲ್ಲಿ ಕುರ್ಚಿ ಎಳೆದುಕೊಂಡು ಕುಳಿತಿರಲಿಲ್ಲ....ಅವರಿಗೆ ಕೆಳಗೆ ಹಂದಾಡುವ ಜನರ—ವಾಹನದ ಕಿವಿಗಡಿಚಿಕ್ಕುವ ಗದ್ದಲ ಕೇಳಿ ಬರುತ್ತಿರಲಿಲ್ಲ, ಏನೂ ಇಲ್ಲ. ಪಂತರು ಕೇವಲ ಪಂತಮಾಸ್ತರರಾಗಿದ್ದರು. ಮುಲ್ಕೀ ಪರೀಕ್ಷೆಯ ಸಂಜೆಯ ವರ್ಗ ಮುಗಿದ ನಂತರ, ಎದ್ದು ನಿಂತು ನತಶಿರರಾಗಿ, ಕೈಜೋಡಿಸಿ "ಯಂ ಶೈವಾಃ ಸಮುಪಾಸತೇ ಶಿವ ಇತಿ." ಎಂಬ ಆ ಪದಿಸ್ಯೆಯನು ಹುಡುಗರ ದನಿಯಲ್ಲಿ ದನಿಗೂಡಿಸಿ, ಸಾಯಂ ಪ್ರಾರ್ಥನೆಯಲ್ಲಿ ಶ್ರೀ ಕೇಶವನಿಗೆ ಅರ್ಪಿಸುವ ಪಂತಮಾಸ್ತರರಾಗಿದ್ದರು.

ಕಿಡಕಿಯಿಂದ ಸಾಮೂಹಿಕ ಗೀತ ಗಾಳಿಯಲ್ಲಿ ತೇಲಿ ಬಂದಿತು.

ಜನಗಣಮನ ಅಧಿನಾಯಕ ಜಯಹೇ। ಭಾರತ ಭಾಗ್ಯವಿಧಾತಾ ॥
ಜಯಹೇ ಜಯಹೇ ಜಯ ಜಯ ಜಯ ಜಯಹೇ ॥

ಪಂತಮಾಸ್ತರರು ಕುರ್ಚಿ ಬಿಟ್ಟು ಎದ್ದು ನಿಂತರು. ನತಶಿರರಾದರು. ಕೈಜೋಡಿಸಿದರು. ಕಿಟಕಿಗಭಿಮುಖರಾಗಿ ವಂದಿಸಿದರು. ಅವರ ಬಾಲಗೋಪಾಲ ವೃಂದ, ಹಾಡು ಮುಗಿಸಿ, ಪುಸ್ತಕ ಕೈಗೆ ತೆಗೆದುಕೊಂಡು ವರ್ಗದಿಂದ ಹೊರಬಿದ್ದು ನಡೆದಿತ್ತು. ಆದರೂ ಪಂತರು ನತಶಿರರಾಗಿ, ಬದ್ಧ ಕರಾಂಜಲಿಯಾಗಿ ಭಾನವಳಿದ ಶೀವಿಯಲ್ಲಿ ನಿಂತಿದ್ದರು.

ಅಡುಗೆಯ ಮನೆಯಲ್ಲಿ ಅತ್ತೆ-ಮಾವರಿಗೆ, ಜೋಡಿಸಿ ಎರಡು ಮಣೆ ಹಾಕಿ, ಚಹದ, ತಿನಿಸಿನ ತಟ್ಟೆ-ಬಟ್ಟಲವಿಟ್ಟು, ಪಂತರನ್ನು ಕರೆಯಲೆಂದು ಬಂದ ಸೋನಾ-ಪಂತಮಾಸ್ತರರ ಪ್ರೀತಿಯ ಸೊಸೆ, ಅವರನ್ನು ನೋಡಿದಳು. ಮಾವನವರು ಆ ರೀತಿ, ಆ ಠೀವಿಯಲ್ಲಿ ನಿಂತ ಅರ್ಥ ಆವಳಿಗಾಗಲಿಲ್ಲ. ಅವಳೂ ಹಾಗೇ ನಿಂತುಬಿಟ್ಟಳು. ಇದು ಸಮಾಧಿಯೋ, ಉನ್ಮಾದವೋ, ಭ್ರಮೆಯೋ—ಒಂದೂ ಆವಳಿಗೆ ಹೊಳೆಯದಾಯಿತು.

ಕೆಲಸದಿಂದ ಆದೇ ತಿರುಗಿ ಬರುತ್ತಿದ್ದ ಬಾಳನನ್ನು ಪಂತರು ನೋಡಿರ ಲಿಲ್ಲ. ಅವರ ಬೆನ್ನು ಆವನು ಬರುವ ದಾರಿಗಾಗಿತ್ತು. ಅವನು ಬರುವದು ಕಾಣುವಂತಿರಲಿಲ್ಲ. ಬಾಳನಿಗೆ ಒಂದು ನಿಮಿಷ ಪಂತರ ಈ ಠೀವಿಯ-ನಿಲು ಮೆಯ ಅರ್ಥ, ಇತ್ತ ಬಾಗಿಲ ಬಳಿ ತನ್ನ ಸೋನಾ ನಿಂತ ಅರ್ಥ, ತಟ್ಟನೇ ಆಗಲಿಲ್ಲ. ಪಂತರ ದೃಷ್ಟಿ ಕಿಟಿಕಿಯಲ್ಲಿ ಕೇಂದ್ರೀ ಕರಿಸಿತ್ತು. ಆ ಕಿಟಿಕಿ- ಪಾರ್ಸೀ ಹಾಯಸ್ಕೂಲಿನ ಕಟ್ಟಡದ ಕಿಟಿಕಿ. ಮ್ಯಾಟ್ರಿಕ್ ಸ್ಪೇಶಲ್ ಕ್ಲಾಸು, ಆ ಕಿಟಿಕಿಯಿದ್ದ ಹಾಲಿನಲ್ಲಿ ನಡೆಯುತ್ತಿತ್ತು. ಅದು ಇದೇ ಮುಗಿದಿರಬೇಕು. ಸಾಯಂ ಪ್ರಾರ್ಥನೆ "ಜನಗಣಮನ ಅಧಿನಾಯಕ" ಮುಗಿದಿರಬೇಕು. ಪಂತರಿಗೆ ತಮ್ಮ "ಯಂ ಶೈವಾಃ ಸಮುಪಾಸತೆ"ಯ ಸ್ಮೃತಿ ಮರುಕಳಿ ಸಿರಬೇಕು. ಅಂತೇ ಪಂತರು ಕಿಟಿಕಿಗಭಿಮುಖರಾಗಿ, ನತಶಿರರಾಗಿ-ಬದ್ಧ ಕಂಕಣರಾಗಿ ನಿಂತಿರಬೇಕು. ಬಾಳ ತಾಡಿಸಿದ. ಮಂಗಲಕ್ಷಣದ ಮಾಂಗಲ್ಯ ಮಸಕದಿರಲೆಂದು, ಮೆಲ್ಲನೆ ಸೋನಾನಿಗೆ ಸನ್ನೆಮಾಡಿ ಒಳಗೆ ಹೋದ.

ಕಿಟಿಕಿಯನ್ನು ಆಳು ಜೋರಿನಿಂದ ಬಡಿದು ಮುಚ್ಚಿದ. ಪಂತರು ಆ ಸ್ವರ್ಗದಿಂದ ಈ ಭೂಮಿಗೆ ಅವತರಿಸಿದರು. ಮತ್ತೆ ಕುರ್ಚಿಯಲ್ಲಿ ವಿರಾಜ ಮಾನರಾದರು.

ಚಹ ಮುಗಿದ ಮೇಲೆ ಪಂತರು ತಮ್ಮ ನೇಹಮಿಯ ವಸ್ತ್ರ-ವಸ್ತು ಭೂಷಣರಾಗಿ ಮೂರನೇ ಮಜಲಿನಿಂದ ಕೆಳಗಿಳಿದರು. ಮನೆಯ ಹಿಂಬದಿಗೆ ಫರ್ಲಾಂಗು-ಒಂದೂವರೇ ಫರ್ಲಾಂಗಿನ ಅಂತರದಲ್ಲಿದ್ದ ದಾದರ ಬೀಚಿಗೆ ಹೋಗಿ, ಜನಸಂಮರ್ದವಿಲ್ಲದ ಒಂದು ತಾವು ನೋಡಿ ಆ ವಾಲುಕಾಮಯ ಸಾಗರದಡದಲ್ಲಿ ಕುಳಿತರು.

ತೆರೆಯ ಅಂಗೈಯಲ್ಲಿ, ದೂರದಲ್ಲಿ ಹಾಯಿದೆರೆದ ನಾವು ನಲಿಯುತ್ತಿದ್ದವು. ಮಹಾರ್ಣವನ ಪಾತಾಳದರಮನೆಯಲ್ಲಿ ಯಜ್ಞ-ಯಾಗ ನಡೆದಿರಬೇಕು—ಮಂತ್ರ ಘೋಷದ ಗಂಭೀರನಾದ ಎಲ್ಲಿಂದಲೋ ಘೂರ್ಣಿಸಿ ಬರುವಂತೆ ಸಾಗರನ ವೇಲಾವಿತಾನ ನಡೆದಿತ್ತು. ದೂರದಲ್ಲಿ ಅನಂತದಂಚು ಸಾಗರವನ್ನು ಬಾಗಿ ಮುದ್ದಿಡುವಂತೆ ಕಾಣುತ್ತಿತ್ತು. ಅಂತವಿಲ್ಲದ—ಪಾರವಿಲ್ಲದ ರತ್ನಾಕರನ ವಿರಾಟ್ ವೈಭವ ಪಂತರ ಕಂಣೆದುರು ಕಟ್ಟಿತ್ತು.

ಪಂತರಿಗೆ ತಮ್ಮ ಕ್ಷುದ್ರತನದ ಕಲ್ಪನೆಯಾಗತೊಡಗಿತ್ತು. ಸಾಗರ ನಿರ್ಮಾಪಕನ ಭವ್ಯತೆಯ-ದಿವ್ಯತೆಯ-ಅನಂತ ಗಭೀರತೆಯ-ವಿಶ್ವವ್ಯಾಪಕತೆಯ ದರ್ಶನ ಮೂಡತೊಡಗಿತ್ತು. ತಟಿತ್‌ಕೋಟಿ ನಿಭಕಾಯ ಜಗನ್ನಾಥನ ಮಹಾದರ್ಶನ ಭಾವ ಮೂಡತೊಡಗಿತ್ತು. ಪಂತರು ಪಂತಮಾಸ್ತರರಾಗಿರಲಿಲ್ಲ. ಪರಮಾತ್ಮಭಾವನಾ ವ್ಯಾಪ್ತ ಚಿತ್ತರಾಗಿದ್ದರು. ಅವರ ಕೈ ಮೇಲೆ ಎತ್ತಿದವು. ತಲೆ ನಸು ಬಾಗಿತು. ಸಮುದ್ರರಾಜನಿಗೆ-ಅಸ್ತಮಿಸಲಿರುವ ಸವಿತೃದೇವನಿಗೆ ಏನೋ ನಿವೇದಿಸಿದರು. ಆ ನಿವೇದನೆಯಲ್ಲಿ ಅರ್ಥವೂ ಇರಲಿಕ್ಕಿಲ್ಲ. ಕೇವಲ ನಿರಾಕಾಂಕ್ಷೆಯಾಗಿರಬಹುದು ಆ ನಿವೇದನೆ! ಯಾರು ಬಲ್ಲರು?

ಮೂರು—ನಾಲ್ಕು ಹುಡುಗರ ಹಿಂಡೊಂದು ಬಂದು ಪಂತರಿಂದ ಅನತಿ ದೂರದಲ್ಲಿ ಮಂಡಿತವಾಯಿತು. ಹುಡುಗರು ತಮ್ಮ ತಮ್ಮಲ್ಲಿ ಮಾತನಾಡಿಕೊಳ್ಳುತ್ತಿದ್ದರು: "ಹತ್ತೆಂಟು ದಿನಗಳಲ್ಲಿ ಶಾಲೆ ಸುರುವಾಗುತ್ತಿದೆ. ಈ ಸಾರೆ ಮ್ಯಾಟ್ರಿಕ್. ತಾವು ಎಷ್ಟೇ ಓದಿಕೊಂಡರೂ ಯೋಗ್ಯ ಮಾರ್ಗದರ್ಶನ ಬೇಕು. ಮಾಸ್ತರರು ಕ್ಲಾಸಿನಲ್ಲಿ ಕಲಿಸದೆ ಮನೆಗೆ ಶಿಕೋಣಿಗೆ ಬಾ ಎನ್ನುತ್ತಾರೆ. ಇದು ವಿದ್ಯಾದಾನದ ಲಕ್ಷಣವಲ್ಲ. ಕೊಳ್ಳೆಹೊಡೆಯುವ ಹಂಚಿಕೆ. ತಿಂಗಳ ಫೀ ಕೊಡಬೇಕಾದರೆ ಸಾಕು ಬೇಕಾಗುತ್ತದೆ. ಇನ್ನು ಈ ಮಾಸ್ತರರ ಕಿಸೆ ತುಂಬುವದು ಎಲ್ಲಿ ಸಾಧ್ಯ? ಸೂಟಿಯೆಂದು ಫೀ ಮಾಫೀ ಮಾಡುವದಿಲ್ಲ; ಮಾಸ್ತರರು ಸೂಟಿಯಲ್ಲಿ ಕಲಿಸಿಲ್ಲವೆಂದು ಅವರ ಸಂಬಳ ಕೊಡದಿರುವದಿಲ್ಲ. ತಮ್ಮ ಸ್ವಾರ್ಥ ಅಷ್ಟೇ ನೋಡಿಕೊಳ್ಳುತ್ತಾರೆ ಎಲ್ಲರೂ. ನಮ್ಮ ಸಂಕಟ ಅವರಿಗೆ ಗೊತ್ತಾಗುವದಿಲ್ಲ. ಸೂಟಿಯಲ್ಲಿ ಮಾಸ್ತರರು ಖಾಲೀ ಮೈಯ್ಬುಡ್ಡಾಡುತ್ತಾರೆ. ಯಾಕೆ ಸ್ಪೇಶಲ್ ಕ್ಲಾಸ ಹಾಕಬಾರದು, ಮ್ಯಾಟ್ರಿಕ್ಕಿನವರಿಗೆ; ತಿಂದ ಫೀಯ ಕೂಳಾದರೂ ಮಾಸ್ತರ ಮೈಗೆ ಹತ್ತುತ್ತಿದೆ."

ಪಂತರಿಗೆ ಯಾರೋ ತಪರಾಕಿ ಹೊಡೆದಂತಾಯಿತು. ಬವಳಿ ಬರುವಂತಾಯಿತು. ಸಾವರಿಸಿಕೊಂಡರು.

ಪಂತರು ಹುಡುಗರ ಕಡೆಗೆ ನೋಡಿದರು. ಎಲ್ಲಾ ಹದಿನಾರು–ಹದಿನೇಳು ವರುಷದ ಬಾಲ ಗೋಪಾಲರು. ಆಳತೆ–ಆಕಾರದಲ್ಲಿ ವಾಮನರಾದರೂ ಬುದ್ಧಿ-ತಿಳುವಳಿಕೆಯಲ್ಲಿ ಬಲಿರಾಜನನ್ನೇ ಬಲಿಕೊಳ್ಳುವ ವಿಶ್ವವ್ಯಾಪಕ ಶಕ್ತಿ–ಸಾಮರ್ಥ್ಯವಂತರು. ಅವರು ಆಡಿದ ಮಾತು ಹದಿನಾರಾಣೆ ಸತ್ಯ ಮಾತು. 'ಮಾಸ್ತರರು ರಣಗೂಳು ತಿನ್ನುತ್ತಾರೆ. ಫುಕ್ಕಟೆ ಮೆಯ್ಯುದ್ದ ಅಡ್ಡಾಡುತ್ತಾರೆ.' ಧರ್ಮರಾಜ, ಬಾಲಕರ ನಾಲಿಗೆಯ ಮೇಲೆ ನಿಂತು ಸತ್ಯ ವದಿಸಿದ್ದ. ಆ ಸತ್ಯ ಅನ್ಯರ ಬಗ್ಗೆ ಅವನು ವದಿಸಿರಲಿಕ್ಕಿಲ್ಲ. ಕರ್ತವ್ಯಚ್ಯುತಿಯ ಎಚ್ಚರ ಕೊಡಿಸಿರಬೇಕು. ಊರಲ್ಲಿಯ ತಮ್ಮ ಹದಿನೈದು ಜನ ಶಿಷ್ಯರ ಸಮೂಹ ಕೂಡ ಪಂತರಿಗೆ ತಮಗೆ ಇದೇ ಬಗೆಯ ಆಹೇರಿಯನ್ನು ಅರ್ಪಿಸುತ್ತಿರಬೇಕು. ಎಲ್ಲಾ ಯೋಗ್ಯ ಆಹೇರಿ! ನಾಲಾಯಖರಿಗೆ ಇದೇ ಸನ್ಮಾನ ಯೋಗ್ಯ. ಪಂತರು ಇಪ್ಪತ್ತೈದು ವರ್ಷದ ನವಕರಿಯ ಅವಧಿಯಲ್ಲಿ ಇಂಥ ಹೀನ ಸನ್ಮಾನಕ್ಕೆ ಯೋಗ್ಯರಾಗಿದ್ದಿಲ್ಲ. ಯಾರೂ ಇಂಥ ಲಘು ಸನ್ಮಾನ ಮಾಡಿರಲಿಲ್ಲ. ಇಂದು ಈ ನಾಲ್ಕು ಹುಡುಗರು, ತಮ್ಮಂಥ ಯಾರೋ ಇನ್ನೊಬ್ಬ ಪಂತೋಜಿಯವರಿಗೆ ಈ ಮಾತಿನ ಶಲ್ಯ ತಿವಿದಿದ್ದರು. ಅದು ತಮಗೂ ತಾಕಿತ್ತು. ಮರ್ಮಭೇದಿಯಾಗಿ ನಟ್ಟಿತ್ತು. ಅಭಿಮಾನಕ್ಕೆ ಗುರಿಯಿಟ್ಟು ನಾಟಿತ್ತು. ಪಂತರು ಸಕಾಲದಲ್ಲಿ ಅದರ ಮರ್ಮಭೇದಿತ್ವವನ್ನು ಅರಿತು ಅರ್ಥ ಮಾಡಿಕೊಂಡರು. ಕರ್ತವ್ಯ ಜಾಗ್ರುತವಾದ ಅವಸಾನ ಅವರಲ್ಲಿ ಬಂದಂತಾಯಿತು. ತಾವು ಆ ಮೆಯ್ಯುವ–ಉಂಡು ಅಂಡಲಿಯುವ ಪಿಂಡದಲ್ಲಿ ಬರಲಾರರು–ಬರಲಾರರು. ತಮ್ಮ ದಾರಿ, ತಮ್ಮ ರೀವಿ, ತಮ್ಮ ಸಾಧನೆ ಬೇರೆ—ತೀರ ಬೇರೆ. ಹೆಜ್ಜೆ ತಪ್ಪಿತ್ತು. ಕಂಣು ಮುಚ್ಚಿದಾಗ ಕಾಲು ಅನ್ಯ ಕವಲಿನಲ್ಲಿ ತಮ್ಮನ್ನು ಸೆಳೆದಿತ್ತು. ಚೋಟಿ ಹುಡುಗರ ರೂಪದಲ್ಲಿ ನಿಂತು ಧರ್ಮರಾಜ ಸತ್ಯ ವದಿಸಿದ; ತಮ್ಮನ್ನು ಜಾಗರಕ್ಕೆ ತಿರುಗಿಸಿದ. ಪಂತರು, ಪಂತ ಮಾಸ್ತರರಾದರು. ಕರ್ತವ್ಯಚ್ಯುತಿ ವಿಮುಖರಾದರು. ಪಂತರು ಗೆದ್ದರು. ಮುಂಬೈ ವೈಭವ ನೋಡಲು ಹೊರಬಿದ್ದು ಹೋದ ಪಂತರು, ಮನೆಗೆ ಬಂದಾಗ ಪಂತ ಮಾಸ್ತರರಾಗಿ ಬಂದಿದ್ದರು.

ಬಾಳನಿಗೆ ಹೇಳಿದರು: "ಬಾಳ, ನಿನ್ನ ಕಾಕೂ ಇರಲಿ ಇಲ್ಲೀ ಇನ್ನೊಂದು ತಿಂಗಳೊಪ್ಪತ್ತು. ನಾ, ನಾಳೀನss ಹೊರಡತೇನಿ ಊರಿಗೆ. ತಿಳೀ ತೇನು ?"

ಮುಂಬೈಗೆ ಬಂದು ಇನ್ನೂ ನಾಕು ದಿನವಾಗಿಲ್ಲ. ಪಂತರು ತಿರುಗಿ ಹೋಗುವ ಮಾತು ಹೇಳಿದ್ದನ್ನು ಕೇಳಿ, ಮಗ-ಸೊಸೆ ಇಬ್ಬರೂ ಅಚ್ಚರಿಗೊಂಡರು. ನರ್ಮದಾ ಕಾಕೂನಿಗೆ ಯಜಮಾನರ ಸತ್ವ ಗೊತ್ತು. ಅವರು ಒಂದೂ ಮಾತಾಡಲಿಲ್ಲ. ಪಂತರಿಗೆ ಒತ್ತಾಯ ಪಡಿಸಿ ಇಟ್ಟುಕೊಂಡರೆ ನಿಂತಾರು: ಆದರೆ ಅವರು ಸುಖಿಯಾಗಲಾರರು, ಅವರಿಗೆ ಸಮಾಧಾನವೆನಿಸದು, ಎಂಬೀ ಮಾತು ನರ್ಮದಾಕಾಕೂ ಅರಿತು ಬಲ್ಲರು. ಅವರನ್ನು ಒತ್ತಾಯ ಪಡಿಸಬೇಡಿರೆಂದು ಮಗ-ಸೊಸೆಗೆ ಹೇಳಿದರು.

ಪಂತರು ಮರುದಿನ ಸಂಜೆಯ ನಾಲ್ಕಕ್ಕೇ ಹೊರಡುವ ಸಿದ್ಧತೆ ನಡೆಸಿದರು. ಕೈಚೀಲದಲ್ಲಿ ತಮ್ಮ ನಾಕಾರು ಅರಿವೆ ತುರುಕಿಕೊಂಡರು. ಏಳು ಹೊಡೆಯುವದರೊಳಗಾಗಿ ಊಟ ಬಗೆಹರಿಸಿದರು. ಎಂಟಕ್ಕೆ ಬೋರಿಬಂದರ ಸ್ಟೇಶನ್ ಬಿಡುವ ಸಿದ್ಧತೆಯಲ್ಲಿದ್ದ ಗಾಡಿಯಲ್ಲಿ ಜಾಗಮಾಡಿಕೊಂಡು ಕುಳಿತರು.

ಬಾಳ-ಸೋನಾ ಅವರನ್ನು ಕಳಿಸಲಿಕ್ಕೆ ಬಂದಿದ್ದರು. ಪಂತರ ಆಕಸ್ಮಿಕ ನಿರ್ಗಮನದ ನಿರ್ಧಾರದಿಂದ ಅವರಿಗೆ ಅತಿಯಾದ ನೋವಾಗಿತ್ತು. ಅವರ ಜೀವನದ ಚುಟುಚುಟು ಅರಿತುಬಲ್ಲ ಬಾಳ ಅವರ ಮಾತಿಗೆ ಒಪ್ಪಿಗೆ ಕೊಟ್ಟಿದ್ದ. ಮೊನ್ನೆಯೇ ಅವರು ಶಾಲೆಯ ಕಡೆಗೆ ಕೈ ಮುಗಿದು, ನಮಿಸಿ ನಿಂತ ನಿಲುವನ್ನು ನೋಡಿಯೇ ತಾಡಿಸಿದ್ದ, ಮೀನ ಬದುಕುವದು ನೀರಲ್ಲಿ- ಎಂಥ ಗಟ್ಟಿ ಮಧುಸದೃಶವಾದ ಹಾಲಲ್ಲಿ ಅಲ್ಲವೆಂದು.

ಪಂತರು ಹೊರಡುತ್ತೇನೆಂದು ಹೇಳಿದಾಗ ಇದೇ ಕಾರಣದಿಂದಾಗಿ ಅವನು ಇರಲು ಆಗ್ರಹ ಪಡಿಸಲಿಲ್ಲ.

ಗಾಡಿ ಸೀಟಿ ಹೊಡೆಯಿತು. ಗಾರ್ಡ ದೀಪ ತೋರಿಸಿದ. ಬಾಳ-ಸೋನಾರಿಗೆ ಆಶೀರ್ವದಿಸುತ್ತಿರುವಾಗಲೇ ಪಂತರ ಗಾಡಿ ಬಿಟ್ಟಿತು.

ಪಂತರು ಮುಂಬೈ ಬಿಟ್ಟರು.

ಮಾರನೆಯ ದಿನ ಬೆಳಗಿನ ಏಳಕ್ಕೆ ಹತ್ತು ನಿಮಿಷ ಇರುವದು-ಬಿಳಿಯ ಖಾದಿಯ ಮುಂಡಾಸದ, ಕೆಂಪು ಗೀರು ಗಂಧದ-ಸೆಟ್ ಕಾಲರಿನ ಕೋಟಿನ-

ಕುತ್ತಿಗೆಯನ್ನು ಮುಚ್ಚಿ ಇಳಿಬಿದ್ದ ಶಲ್ಲೆಯ–ಪಂತ ಮಾಸ್ತರರು, ಹಿಂಬದಿ ಕೈಕಟ್ಟಿಕೊಂಡು ಶಾಲೆಯ ದಿಕ್ಕಿನಲ್ಲಿ ನಡೆದಿದ್ದರು.

"ಪಂತ ಮಾಸ್ತರ ಬಂದ್ರು."

"ಪಂತ ಮಾಸ್ತರ, ಅಧ್ಯಾಂಗ ಇಷ್ಟು ಲಗೂ ಬಂದರು!"

"ಇನಾ ಹೋಗಿ ನಾಕ ದಿನಾ ಸುದ್ದೀ ಆಗಿಲ್ಲಲ್ಲ."

ನೂರು ನಾಲಿಗೆ ಮಸೆಯುತ್ತಿದ್ದವು. ಎಲ್ಲರಿಗೂ ಪಂತರ ಪುನರಾಗಮನದ ವಿಸ್ಮಯವೇ!

ಸಂಜೆಯ ಐದಕ್ಕೆ, ಶಾಲೆಯ, ಮುಲ್ಕೀ ಪರೀಕ್ಷೆಯ ವರ್ಗದಿಂದ ಮತ್ತೆ ಹದಿನೈದು ಹುಡುಗರ–ಪಂತ ಮಾಸ್ತರರ ದನಿ ಮೇಳೈಸಿ—

"ಯಂ ಶೈವಾಃ ಸಮುಪಾಸತೇ ಶಿವ ಇತಿ"

ಸಾಯಂ ಪ್ರಾರ್ಥನೆ ಕೇಳಿ ಬಂದಿತು.

ಹಾಲಿನಿಂದ, ನೀರಿಗೆ ನುಸುಳಿ ಮೀನ ಬದುಕಿಕೊಂಡಿತು.

೮-೯-೧೯೫೬

# ಗೋಗ್ರಹಣ

ತಮ್ಮ ಶಕ್ತಿ, ಸಾಮರ್ಥ್ಯವನ್ನು ಪಣಕ್ಕೊಡ್ಡಿ ಜಯವಿಜಯರು ಆ ಮನೆಯನ್ನು ತುರಂಗವನ್ನಾಗಿ ಮಾಡಿದ್ದರು. ಇವರು ಕಾಳಗದ ಕಣಕ್ಕಿಳಿದೊಡನೆ ಊರಲ್ಲಿಯ ಕಟ್ಟೆಪುರಾಣದ ನೂರಿನ್ನೂರು ರಿಕಾಮುಚೋಟರು ಜಯ–ವಿಜಯರ ಬೆನ್ನಿಗೆ ನಿಂತು ಸಾರಥ್ಯ ಮಾಡುತ್ತಿದ್ದರು. ಈ ಕೋಳಿಗಳು ರಣ ಝುಂಝಾರರಂತೆ, ಬಲಗಾಲು ಮೇಲೆತ್ತಿ ಹುಂಜದ ಪಂಜು ನಿಗುರಿಸಿ, 'ಕುಕ್ಕೂಕೂ' ಎಂದು ಪಾಂಚಜನ್ಯ ಬಾಜಿಸಿದಾಗ "ಭಲೇ, ಭೇಷ್, ಶಹಾಬ್ಬಾಸ್" ಇತ್ಯಾದಿ ಪ್ರೋತ್ಸಾಹನ ಪರ ಉತ್ಸಾಹದ ಕೊಂಬು ಕಹಳೆ ದುಮುದುಮಿಸಿ, ಉರಿಯುವ ಬೆಂಕಿಯಲ್ಲಿ ಒಣಗಿದ ಹುಲ್ಲನ್ನು ಎರಚಿದಂತಾಗುತ್ತಿತ್ತು. ಒಮ್ಮೆ ಜಯ ಗೆದ್ದು ವಿಜಯನಾದ ಮಾಡಿದರೆ, ಇನ್ನೊಂದು ಸಲ ವಿಜಯ ನೆತ್ತರೋಕುಳಿಯಾಡಿ ಜಯಧ್ವನಿ ಮಾಡುತ್ತಿದ್ದ. ಮೀಸೆ ಮಣ್ಣಾದರೂ ಕಾದುವ ಮದ ಇಬ್ಬರಲ್ಲೂ ಅದಮನೀಯವಾಗಿಯೇ ಇತ್ತು. ಕಲಹ ಕೋಲಾಹಲದಲ್ಲಿ ಜಾತವೇದ ತಾನೇ ಉರಿದೆದ್ದಂತಿತ್ತು.

ಜಯ-ವಿಜಯರು ತಾವೇ ಖುದ್ದಾಗಿ ಕಾದುತ್ತಿದ್ದ ಪ್ರಸಂಗ ತೀರಾ ಕ್ವಚಿತ್. ಮೃತ್ಯುಗಳಿಗೆ ಸನ್ನಿಹಿತವಾದಾಗ, ರಾವಣ ರಾಮನೊಡನೆ, ದುರ್ಯೋಧನ ಭೀಮನೊಡನೆ ಸೆಣಸಿದಂತೆ, ಆ ಅಂತಿಮ ಗಳಿಗೆಯನ್ನು ಅವರು ಕೇವಲ ತಮಗಾಗಿ ಮೀಸಲಿರಿಸಿಕೊಂಡಿರಬೇಕು. ಸದ್ಯ ಮಾತ್ರ ಜಯ ತನ್ನ ಬಳಗದಲ್ಲಿಯ, ವಿಜಯ ಸ್ವಪರಿವಾರದಲ್ಲಿಯ ಚವಲಿ-ಪಾವಲಿ-ಆಣೆಯ ನಿಕೆಲ್ ಯೋಧರನ್ನು ಒಬ್ಬರ ಮೇಲೊಬ್ಬರು ಕಟ್ಟುತ್ತಿದ್ದರು. ಅನ್ನಋಣದಲ್ಲಿದ್ದ ಆಳು–ಕಾಳು, ದನ–ಕರ ಕೂಡ ಈ ಟಗರು ಕಾಳಗದಿಂದ ಹೊರತಾಗಿರಲಿಲ್ಲ. ದ್ವೇಷದ್ವೇಷದ ದುರ್ವಾಸ ಅಷ್ಟು ಅಸಹ್ಯವಾಗಿ ಬೀಸುತ್ತಿತ್ತು.

ಊರಲ್ಲಿಯ ನಾಲ್ಕು ಜನ ಹಿರಿಯರು–ತಿಳಿದವರು, ಇದರ ಹೀನ ಪರಿಣಾಮವನ್ನು ಕುರಿತು ಇಬ್ಬರಿಗೂ ಹೇಳಿ ನೋಡಿದರು. ಊರಿಗೇ ಆದರ್ಶ

ಪ್ರಾಯವಾದ ಮನೆತನ ಈ ರೀತಿಯಾಗಿ ಹೋಳಿಯಲ್ಲಿಯ ಕಿಚ್ಚನ್ನು ಎತ್ತಿ ತೂರಾಡಿದರೆ ಅದರ ಝಳ, ಊರಲ್ಲಿಯ ಮನೆಮನೆಗೂ ತಾಕಿ, ವಡವಾನಲ ಊರನ್ನೇ ರಾಚಬಹುದೆಂದು ಭೀತಿಯನ್ನು ವ್ಯಕ್ತಪಡಿಸಿದರು. ಆದರೆ ಒಂದೆಡೆ ಮದೋನ್ಮತ್ತ ಗಜಾಲಿಶ್ರೇಷ್ಠ, ಇನ್ನೊಂದು ಕಡೆಗೆ ಜಾಗ್ರತಹರಿ. ಜೀವನವನ್ನು ಕಾಸಿಗೆ ಕಡೆಯಾಗಿ ಭಾವಿಸಿ, ಎದುರು-ಬದುರು ಸಂಧಿಸಿದಾಗ ಯಾರ ಸಂಧಾನವೂ ಸಫಲವಾಗುವಂತಿರಲಿಲ್ಲ. ಜಯ-ವಿಜಯರಿಗೆ ಅನ್ಯರ ನೆರಪಿನ ಅಗತ್ಯ, ಅದರ ಆವಶ್ಯಕತೆ ಇರಲೇ ಇಲ್ಲ. ಆ ಜೋಡಿ ಪಿಂಡ, ದ್ವೇಷದ ಕರ್ಣಕುಂಡಲ ಧಾರಣಮಾಡಿಯೇ ಅವತರಿಸಿದಂತಿತ್ತು. ಊರವರು ಬೇಸತ್ತು—

"ದೇವರು ಮಾಡಿಸಿದಂತೆ ಆಗುತ್ತದೆ" ಎಂದು ತಮಗೆ ಅಚಿಂತ್ಯ-ಅಗಮ್ಯನಾದ ಆ ಪರಮಾತ್ಮನಿಗೇ ಸರ್ವಭಾರವನ್ನು ನಿರ್ವಹಿಸಿ ನಿಶ್ಚಿಂತರಾದರು.

ಜಯ-ವಿಜಯರನ್ನು ಪಡೆದ ಆ ಮನೆತನ ಬಹಳ ದೊಡ್ಡದು. ಸುತ್ತಲಿನ ಹತ್ತು ಹಳ್ಳಿಗೇ ಮೇಲು ಪಂಕ್ತಿಯಾದ ಕುಟುಂಬ. ಜಯ-ವಿಜಯರ ಅಜ್ಜ-ಆರು ತಲೆ, ಮುತ್ತಜ್ಜ ಮೂರು ತಲೆ ಹಿರಿಯರು ಹಾಲು ಜೇನಾಗಿ ಬೆರೆತು ಬಾಳಿದ್ದರು, ಒಂದೆ. ಆ ಮನೆತನಕ್ಕೆ ಇಂಥ ಕುಂದು ಬಂದಿತು, ಅದರ ಪ್ರತಿಷ್ಠೆ ಮಸಳಿಸಿತು—ಎಂಬ ಮಾತನ್ನು ಎಂದೂ ಯಾರೂ ಕೇಳಿರಲಿಲ್ಲ. ಹಿಂದಿನ ಹುತ್ತು ತಲೆಮೂರಿನ ಜನ, ಮನೆತನದ ವೈಭವವನ್ನು ಬೆಳಸಿ ಬಾಳಿಸಿದ್ದರು. ಅದರ ಕಾಂತಿಯನ್ನು ಉಜ್ವಲಿಸಿದ್ದರು. ಜಯ-ವಿಜಯರ ರಕ್ತದಲ್ಲಿ, ನಾಡಿ ನಾಡಿಯಲ್ಲಿ ಹಿಂದಿನ ಆ ಹಿರಿಯರ ಸರ್ವ ಗುಣಗಳಿದ್ದರೂ, ಅವರಲ್ಲಿ ದುರ್ಯೋಧನ ಪ್ರವಾಹ ಯಾವ ಶಕುನಿಯ ಮಾಯೆಯಿಂದಲೋ ಮಿಲಿತವಾಗಿ ಆ ಮನೆತನದ ಕೀರ್ತಿಗೆ ಕೃಷ್ಣಛಾಯೆಯನ್ನು ಹೊಚ್ಚಿತ್ತು.

ಜಯ-ವಿಜಯರು ಬರಿಯ ಬೆನ್ನಿಗೆ ಬಿದ್ದ ಅಣ್ಣತಮ್ಮಂದಿರಾಗಿ ಬಂದಿರಲಿಲ್ಲ. ಒಂದೇ ಉಸುರಿನಲ್ಲಿ ಭೂಮಿಗವತರಿಸಿದ ಅವಳಿ-ಜವಳಿಯಾಗಿದ್ದರು. ಈ ಯಮಳರ ಆಗಮನದಿಂದ, ಹೆತ್ತಾಯಿ ಸೀತಕ್ಕ ತನ್ನ ಭಾಗ್ಯಕ್ಕೆ ಎಣೆಯೇ ಇಲ್ಲವೆಂದು ಭಾವಿಸಿದ್ದಳು. ಸೀತಕ್ಕನ ಯಜಮಾನ-ರಾಮಣ್ಣನವರೂ, ತಮ್ಮ ಅರ್ಧಾಂಗಿ ಜನಕ-ರಾಮರ ತಳಿಗೇ ಜನ್ಮದಾತೆಯಾದಳೆಂಬ ಅಭಿ

ಮಾನ ತಾಳಿದ್ದರು. ಜಯ-ವಿಜಯರು ತಮ್ಮ ಬರವಿನಿಂದ ಮನೆಯಲ್ಲಿ ಹರ್ಷಸುಖದ ಚಿಲುಮೆಯನ್ನೇ ಚಿಮ್ಮಿಸಿದ್ದರು.

ಜಯ ಅಣ್ಣನಾಗಿ ಬಂದಿದ್ದರೆ ವಿಜಯ ಅವನಿಗೆ ವಿಧೇಯನಾಗಿ ಬಾಗಿ ನಡೆಯುತ್ತಿದ್ದ. ಇಲ್ಲ, ವಿಜಯನೇ ಹಿರಿಯನಾಗಿದ್ದರೆ ಜಯ ಅವನ ಅಂಕಿತ ದಲ್ಲಿರುತ್ತಿದ್ದ. ಮನೆತನದ ಹಿರಿಯತನಕ್ಕೆ ಯಾವಾಗಲೂ ಹಿರಿಯ ಮಗ ನಿಗೇ ಬಾಧ್ಯತೆ. ಈ ಪರಂಪರೆ, ಆ ಮನೆತನದಲ್ಲಿ ನಿರಾತಂಕವಾಗಿ ನಡೆದು ಬಂದಿತ್ತು. ಅದಕ್ಕೆಂದೂ ವ್ಯತ್ಯಯ-ವ್ಯತ್ಯಾಸ ಬಂದಿರಲಿಲ್ಲ. ರಾಮಣ್ಣನವರಿಗೆ ಈಗ ಮಾತ್ರ ಚಿಂತೆಗಿಟ್ಟುಕೊಂಡಿತು—ತಮ್ಮ ಅಧಿಕಾರದ ಸೂತ್ರಗಳನ್ನು ಯಾರಿಗೊಪ್ಪಿಸುವದೆಂಬ ಬಗ್ಗೆ. ಇಬ್ಬರೂ ಮಕ್ಕಳು, ಬಲಿಷ್ಠ-ಸುರೂಪರು-ಸರಿಸಮಾನ ವಯಸ್ಕರು. ಜಯನಿಗೆ ತಮ್ಮ ಪೀಠದ ಕಾಯಿಕೊಟ್ಟರೆ, ವಿಜಯನಿಗೆ ಅನ್ಯಾಯ ಬಗೆದಂತೆ. ವಿಜಯನಿಗೆ ಜಯಮಾಲೆ ಹಾಕಿದರೆ, ತಾವೇ ತಮ್ಮ ತಳಿಯಲ್ಲಿ ವಿಭೇದ ನೀತಿ ಕಲ್ಪಿಸಿದಂತೆ. ಸೀತಕ್ಕ ಹೆಣ್ಣು-ಹೆಂಗಸು. ತನಗೆ ಬಗೆಹರಿಯದ ಸಮಸ್ಯೆಯನ್ನು ದೇವರಿಗೆ ಒಪ್ಪಿಸಿ ಅವನ ನಿರ್ಣಯವನ್ನು ಶಿರಸಾ ಮಾನ್ಯಮಾಡತಕ್ಕವಳು. ಯಜಮಾನರಿಗೆ ಸೂಕ್ತ ಸಲಹೆ ಕೊಟ್ಟಳು—

" ಹಣಮಂದೇವರಿಗೆ ಪೂಜಿ ಕಟ್ಟಿಸಿರಿ. ಬಲಾಬಲ ಕೇಳರಿ."

ಮಾರುತಿರಾಯನ ಉಗ್ರಮುಖರಂಗದಲ್ಲಿ, ವರದಾನದ ಆಶಾಕಿರಣ ವನ್ನು ಕಾಣುವ ಸಾಹಸವನ್ನು ರಾಮಣ್ಣ ಮಾಡಿದರು. ಕುಲಪುರೋಹಿತ ಭೀಮಾಚಾರ್ಯರು ಮಾರುತಿರಾಯನನ್ನು ಅನುನಯಿಸಿ,-ಅಳುಕಿಸಿ-ಅಂಜಿಸಿ ಫಲಾಫಲ ಬೇಡಿದರು. ಮಾರುತಿರಾಯ ಎರಡು ಸಲ, ಬಲ-ಎಡ ಎರಡನ್ನೂ ಕೊಟ್ಟ. ಮೂರನೇ ಸಲ, ಭೀಮಾಚಾರ್ಯರ ಭೀಮಗಂಭೀರ ವಾಣಿಗೆ ಬೆದರಿ, ಜಯನಿಗೆ ಬಲಕೊಟ್ಟ. ರಾಮಣ್ಣನವರು ದೇವರ ಪ್ರಾಮಾಣಿಕ ಅಭಿಪ್ರಾಯ ವನ್ನು ಆಶೀರ್ವಾದವೆಂದು ಭಾವಿಸಿದರು. ಜಯ, ಇನ್ನು Prince of Wales ಪೀಠದಲ್ಲಿ ವಿರಾಜಮಾನನಾಗಲು ಅಡ್ಡಿ-ಆತಂಕವಿಲ್ಲವೆಂದರು. ಅಂದಿನಿಂದ ಅವರ ಒಲವು ಜಯನ ಕಡೆಗೆ ವಾಲಿತು.

ಬೆಳಗಿನಲ್ಲಿ ಎಚ್ಚರವಾದೊಡನೆ ಅವರು ಕರಮುಸೆದು " ಕರಾಗ್ರೇ ವರ್ತತೇ ಲಕ್ಷ್ಮೀ, ಕರಮಧ್ಯೇ ಸರಸ್ವತೀ" ಎಂದು ಶ್ರೀ—ಶಾರದೆಯರ ಸ್ಥಾನ

ಮಾನ ಗುರುತಿಸಿ, ಅವರಿಗೆ ಅಭಿವಾದನೆ ಸಲ್ಲಿಸಿ, ''ಜಯಾ'' ಎಂದು ಕೂಗುತ್ತಿದ್ದರು. ಜಯ, ತಟ್ಟನೆ ಬಂದು ಎದುರು ನಿಂತರೆ ಅವರಿಗೆ ಸರ್ವ ಮಾಂಗಲ್ಯದ–ಸರ್ವ ವೈಭವದ ದರ್ಶನ ಘಟಿಸಿದ ಆನಂದವಾಗುತ್ತಿತ್ತು. ಮಗನ ಮುಖ ನೋಡದೆ ಅವರು ಹಾಸಿಗೆಯಿಂದ ಈಚೆಗೆ ಬರುತ್ತಿರಲಿಲ್ಲ. ಕಾರಣ, ಅವನು ದೇವರ ವರದಾನದ ಫಲವಾಗಿದ್ದನಲ್ಲ! ರಾಮಣ್ಣನವರ ಈ ಚಾಳಿಯಲ್ಲಿ ಭವಿಷ್ಯದ ಕಿಡಿ ಹುದುಗಿದ್ದರ ಕಲ್ಪನೆ ಅಂದು ಅವರಿಗೂ ಬರಲಿಲ್ಲ; ಸೀತಕ್ಕನೂ ಅದನ್ನು ಲಘುವಾಗಿ ಭಾವಿಸಿದ್ದಳು. ಆದರೆ ತೃಷಾರ್ತವಿಧಿ, ಮಹಾಬಲಿಯ ಆಪೋಷಣೆಗೆ ಸರ್ವಸನ್ನಾಹ ಮಾಡಿಕೊಂಡು ಜಪ್ಪಿಸಿದ್ದ.

ಒಂದು ಬೆಳಗು ಮುಂಜಾನೆ, ರಾಮಣ್ಣನವರು ನಿತ್ಯನೇಮದಂತೆ 'ಜಯಾ' ಎಂದು ಕೂಗಿದಾಗ, ಜಯನು ಬರದೆ, ವಿಜಯ ತಂದೆಯ ಸಮ್ಮುಖದಲ್ಲಿ ಬಂದು ನಿಂತ. ಯಮಧರ್ಮರಾಜ ಕೋಣವಾಹನನಾಗಿ ಬಂದಿದ್ದರೆ ಯಾವ ಅಸಡ್ಡೆ–ಎಂಥ ಭೀತಿಯಿಂದ ಮುಖವನ್ನು ಮುಚ್ಚಿಕೊಳ್ಳಬಹುದಾಗಿತ್ತೋ, ಅಂಥ ವಿಕಾರ ಮುಖಮಾಡಿ, ರಾಮಣ್ಣ ತಟ್ಟನೆ ಈ ಬದಿಯಿಂದ ಆ ಬದಿಗಾದರು. ದೇವರು ಬಲಕೊಡದ ಕರಿಗಾಲನನ್ನು ನೋಡಿದ ಸಂತಾಪ ಅದು. ತಂದೆಯ ಈ ತಾತ್ಸಾರ–ಅಸಡ್ಡೆ, ವಿಜಯನ ಎದೆಯಲ್ಲಿ, ತಪ್ತಶಿಖಿಯಲ್ಲಿ ಕಾದು ನಿಗಿನಿಗಿಯಾದ ಸಲಾಕೆಯನ್ನು ತೂರಿದಂತಾಯಿತು. ಅವನೂ ಅಷ್ಟೇ ತ್ವೇಷದಿಂದ, ತಾತ್ಸಾರದಿಂದ ಸುಂಟರಗಾಳಿಯಂತೆ ಹಿಂದಿರುಗಿ ನಡೆದುಬಿಟ್ಟ. ಬರಿಯ ತಂದೆ–ಮಗನಲ್ಲಿ ದ್ವೈತ್ಯಭಾವ ನಿರ್ಮಾಣವಾಗಲಿಲ್ಲ. ಅದರ ನಂಜು ಜಯನಿಗೂ ತಾಕಿತು. ದೇವರನ್ನು ನಂಬಿದ ರಾಮಣ್ಣ ಸ್ವಹಸ್ತದಿಂದ ಹೊಟ್ಟೆಯಲ್ಲಿ ಬಂದ ಮಕ್ಕಳ ಹೃದಯಕ್ಷೀರೋದಧಿಯಲ್ಲಿ ಲವಣ–ಕ್ಷಾರ ಬೆರೆಸಿದರು. ಅವರಲ್ಲಿಯ ಸುಪ್ತ ಜಾತವೇದ–ಹುತಾಶನರನ್ನು ಕೆದಕಿ ಎಬ್ಬಿಸಿದರು. ಅಂದು ಭೀಮಾಚಾರ್ಯರ ಗದರಿಕೆಗೆ ಬೆದರಿದ ಮಾರುತಿರಾಯ, ತನ್ನ ಬಾಲವಲ್ಲಿಯ ವಿಷ ಸತ್ತಿಲ್ಲವೆಂದು ತೋರಿಸಿದ.

ಧೃತರಾಷ್ಟ್ರ–ಗಾಂಧಾರಿಯರ ಪೂರ್ವಜನ್ಮದ ಕುಕರ್ಮ ಅವರಿಗೆ ಜೀವಂತ ರೌರವ–ನರಕ ದರ್ಶನಮಾಡಿಸಿತು. ಮಕ್ಕಳಿಂದ ಕಾಕಪಿಂಡವಿಡಿಸಿಕೊಳ್ಳದೆ, ಅವರಿಗೇ ಧರ್ಮೋದಕ ಕೊಡಹಚ್ಚಿತು. ಆದರೆ ರಾಮಣ್ಣ–ಸೀತಕ್ಕ ಪುಣ್ಯವಂತರು. ಮಕ್ಕಳು ಕುರುಕ್ಷೇತ್ರದಲ್ಲಿ ಮೇಳವಿಸುವದಕ್ಕಿಂತ

ಮುಂಚೆಯೇ ಕಣ್ಣುಮುಚ್ಚಿ ತಣ್ಣಗಾದರು. ಮುಂದಿನ ಯಾವ ವೈಭವವನ್ನೂ ಕಣ್ಣಾರೆ ಕಾಣುವ ಸುಯೋಗ-ಕುಯೋಗ ಪಡೆದು ಬಂದಿರಲಿಲ್ಲ.

ರಾಮಣ್ಣನವರ ನಿರ್ವಾಣದೊಡನೆ ಆ ಮನೆ ಒಡೆದು ಎರಡು ಹೋಳಾಯಿತು. ಆ ದೊಡ್ಡ ಮನೆಯಲ್ಲಿ ಅಡ್ಡಗೋಡೆ ಎದ್ದಿತು. ಗ್ರಾಮ ಪಂಚಾನನರ ಸಮ್ಮುಖದಲ್ಲಿ ಆಸ್ತಿಯ ವಿಭಾಗಣೆಯಾಯಿತು. ಜಯ-ವಿಜಯರು ಪೂರ್ವ-ಪಶ್ಚಿಮಾಭಿಮುಖಿಯಾದರು. ಚುಂಬಕಗಾಳಿ ಉತ್ತರ ಧ್ರುವದಿಂದ ದಕ್ಷಿಣ ಧ್ರುವದ ಕಡೆಗೆ ಬೀಸುತ್ತಿರಬೇಕು. ಆದರೆ ಜಯ-ವಿಜಯರ ಪೂರ್ವ-ಪಶ್ಚಿಮದಲ್ಲಿ ಬೀಸುತ್ತಿದ್ದ "ಭೀಷಾಸ್ಮಾದ್ ವಾತ" ಕೇವಲ ತ್ವೇಷಾಗ್ನಿಪೂತ!

ಜಯ-ವಿಜಯರು ಸರ್ವಗುಣ ಸಂಪನ್ನರು. ಬುದ್ಧಿ-ಚಾತುರ್ಯ-ಚಾಣಕ್ಯ-ತಂತ್ರದಲ್ಲಿ ಅವರು ರಾಜಶ್ರೀ ಚಾಕುವಿನಂತೆ! ಇಂದ್ರನಾಯುಧಕ್ಕೂ ಈ ಅಲುಗಿನ ಧಾರೆ ಇರಲಾರದು, ಅಷ್ಟು ಹರಿತ-ಅಷ್ಟು ನಿಶಿತ. ಆಸ್ತಿಯ ವಿತರಣೆಯನ್ನು ಮಾಡುವಾಗ ಗ್ರಾಮ ಪಂಚಾನನರು ಧರ್ಮರಾಜನ ಸತ್ಯಸಂಧತೆಯನ್ನು ಅನುಸರಿಸಿದ್ದರು. ಜಯ-ವಿಜಯರು ಮಾತುಮಾತಿಗೆ ಕತ್ತಿ ಮಸೆಯದಿರಲಿ ಎಂಬ ಪೂರ್ವಾಲೋಚನೆಯಿಂದ ಸೂಕ್ತರೀತಿಯಲ್ಲಿಯೇ ಆಸ್ತಿಯ ಹಂಚಿಕೆ ಮಾಡಿದ್ದರು. ಆಸ್ತಿಯ ವಿಚಾರದಲ್ಲಿ ಅಂಥ ಘರ್ಷಣೆ-ಚಕಮಕಿ ಹಾರುವ ಸಂಭವವಿರಲಿಲ್ಲ. ಆದರೆ ಸಾರ್ವಜನಿಕ ಮಾನ-ಸನ್ಮಾನದ ಪ್ರಸಂಗದಲ್ಲಿ ಯಾರಿಗೆ ಅಗ್ರಪೂಜೆ ಎಂಬ ಮಾತು ಅನಿರ್ಣಿತವಾಗಿಯೇ ಉಳಿಯಿತು. ಊರಿಗೆ ಮಠಾಧಿಪತಿಗಳು ಬಂದರೆ, ಯಾರಲ್ಲಿ ಮೊದಲು ಪಾದಪೂಜೆಯಾಗಬೇಕು. ಯಾರಲ್ಲಿ ಮೊದಲು ಭಿಕ್ಷೆ ನಡೆಯಬೇಕು, ನರಸಿಂಹದೇವರ ಉತ್ಸವದಲ್ಲಿ ಯಾರಿಗೆ ಮೊದಲು ತೀರ್ಥ ವಿನಿಯೋಗವಾಗಬೇಕು. ಎಂಬ ವಿಷಯಗಳಲ್ಲಿ ವಾದ ವಿಪರೀತಕ್ಕಿಟ್ಟುಕೊಂಡಿತು. ಒಮ್ಮೆ ಅರ್ಚಕ ನಾರಾಯಣಭಟ್ಟ ತೀರ್ಥವಿನಿಯೋಗ ಮಾಡದೆ, ನಾಲ್ಕು ತಾಸು ತೀರ್ಥದ ಗಿಂಡಿ ಹಿಡಿದುಕೊಂಡು ನಿಂತು ಕೊನೆಗೆ ಬೇಸತ್ತು ಅದನ್ನು ದೇವರ ಭಾವಿಗೆ ಸುರುವಿದ್ದ. ಜಯ, ಒಮ್ಮೆ ಮಠಾಧೀಶರಿಗೆ ಹೇಳಿದ್ದ: 'ವಜ್ರಮಂಟಪದಲ್ಲಿ ಪೂಜೆಯಾಗಲಿ, ಐದು ಸಾವಿರ ಎಣಿಸುವೆನೆಂದು. ಬಡ ಸ್ವಾಮಿಗಳಲ್ಲಿ ಅದಕ್ಕಿಂತ ಮೌಲ್ಯವಾನ್ ಮಂಟಪವಿರಲಿಲ್ಲ-ಯಾಕೆಂದರೆ ವಿಜಯ ತನ್ನ ಭಿಕ್ಷೆಯ ಅಂಕಿಯನ್ನು ಆರು ಸಾವಿರಕ್ಕೆ ಏರಿಸಿದ್ದ. ರೇಗಿದ ಯತಿಗಳು ಹೇಳಿಕಳಿಸಿದರು-

ಬಹಿಷ್ಕಾರ ಪ್ರಕಾರಿಸುತ್ತೇವೆಂದು. ಜಯ–ವಿಜಯರು ಪ್ರತಿಯಾಗಿ ಹೇಳಿ ಕಳಿಸಿದರು: "ಸ್ವಾಮೀ, ಬಹಿಷ್ಕಾರದ ಅಸ್ತ್ರವನ್ನು ಅಗತಿಕರ ಮೇಲೆ ಪ್ರಯೋಗಿಸಿ. ನಿಮಗೆ ದುಡ್ಡು ಬೇಕಾಗಿದ್ದರೆ-ನಮಗೆ ಪ್ರತಿಷ್ಠೆ ಬೇಕು. ನಮ್ಮ ಸ್ಥಾನಮಾನದ ನಿರ್ಣಯವಾಗಬೇಕು." ಜಯ–ವಿಜಯರ ಸ್ಥಾನಮಾನವನ್ನು ನಿಷ್ಕರ್ಷಿಸುವದೆಂದರೆ ಪರಮಾತ್ಮನ ನಿರ್ಣಯಕ್ಕೆ ಶರಣುಹೋಗಬೇಕು. ಸ್ವಾಮಿಗಳಿಗೆ ಇಷ್ಟು ಬೇಗ ಅಷ್ಟುದೂರ ಪ್ರಯಾಣಿಸುವ ತಾಕತ್ತು ಇರಲಿಲ್ಲ. ಜಯ–ವಿಜಯರು ಅಭೇದ್ಯರಾಗಿಯೇ ಉಳಿದರು.

ಒಮ್ಮೆ ದೀಪಾವಳಿಯ ಹೊತ್ತಿಗೆ, ಜಯ–ವಿಜಯರ ಮಕ್ಕಳು, ತಮ್ಮ-ತಮ್ಮ ಮನೆಯಂಗಳದಲ್ಲಿ ಪಟಾಕ್ಷಿ– ಮದ್ದಿನ ಕುಳ್ಳಿ ಹಾರಿಸುತ್ತಿದ್ದರು. ಅದರಲ್ಲಿಯ ಕಿಡಿ ಸಿಡಿದು, ಗಗನಭೇದಿಯಾಗಿ ಮೇಲೇರಿ, ಆ ದೊಡ್ಡ ಮನೆಯ ನಡುವೆ ಅಡ್ಡಮಲಗಿದ ಚೈನಾಭಿತ್ತಿಯನ್ನು ಅಲಕ್ಷಿಸಿ ಅತ್ತಿತ್ತ ಹಾರುತ್ತಿದ್ದವು. ಅಗ್ನಿಕಾರಂಜಿ ರುದ್ರನಾಟ್ಯ ನಡೆಸಿತ್ತು. ಮನೆಯಲ್ಲಿಯ ಆಳು–ಕಾಳು ಕೂಡ, ಈ ಅಗ್ನಿ ನೃತ್ಯವಿಲಾಸದಲ್ಲಿ ಭಾಗಿಯಾಗಿತ್ತು. ಜಯ–ವಿಜಯರು ಮಾತ್ರ ಅಂದು ಮನೆಯಲ್ಲಿರಲಿಲ್ಲ.

ವಿಜಯನ ಆಳುಮಗ ಒಂದು ದೊಡ್ಡ ಪಟಾಕ್ಷಿ ಸರಕ್ಕೆ ಅಗ್ನಿದಂಶ ಮಾಡಿಸಿ ಅದನ್ನು ಮೇಲೆ ತೂರಿದ. ಚಿಟಪಟಗುಟ್ಟುತ್ತ ಅದು ಸಿಡಿಯತೊಡಗಿತು. ಅದೇ ಸುಮಾರಿಗೆ ಆಚೆಯ ಮನೆಯಂಗಳದಲ್ಲಿ ಜಯನ ಹಿರಿಯ ಮಗ ಮದ್ದಿನ ಕುಳ್ಳಿಯ ಬಾಯಿಗೆ ಬೆಂಕಿ ತಿವಿದ. ಆ ಕುಳ್ಳಿಯ ಎದೆಯಿಂದ ಸಾವಿರ ನಾಲಗೆ ಚಾಚಿ, ಬೆಂಕಿ ಕಿಡಿ ಕಾರತೊಡಗಿತು. ಅದರ ಕಿಡಿ ಎಲ್ಲೆಂದರೆ ಅಲ್ಲಿ ತೂರತೊಡಗಿದವು. ಇತ್ತ ಪಟಾಕ್ಷಿಯ ಗಲಾಟೆ-ಅತ್ತ ಮದ್ದಿನ ಕುಳ್ಳಿಯ ಆರ್ಭಟೆ. ಗಾಳಿ ಗದ್ದಲು ಮಾಡಿತು. ಒಂದು ಕಿಡಿ ಸಿಡಿದು, ಜಯನ ಮನೆಯಲ್ಲಿಯ ದನದ ಧಾಬೆಯಲ್ಲಿ ಒಟ್ಟಿದ ಕಣಿಕೆಯ ಬಣವಿಯಲ್ಲಿ ಬಿದ್ದು ಹೊತ್ತಿಕೊಂಡಿತು. ಗಾಳಿಯೂ ರಭಸದಿಂದ ಬೀಸಿ ಹುತಾಶನನ್ನು ರೊಚ್ಚಿಗೆಬ್ಬಿಸಿತು. ನೋಡನೋಡುವಷ್ಟರಲ್ಲಿ ಬೆಂಕಿ ಭೀಮಭಯಂಕರವಾಗಿ ಭೈರವ ನಾಟ್ಯ ನಡೆಸಿತು. ದನದ ಧಾಬೆ ಕಟ್ಟಿಗೆಯದು. ಅದೂ ಅಗ್ನಿಮುಖದಲ್ಲಿ ಬಿದ್ದು ಎಲಿವಿಲಿಯಾಗಿ ಕತ್ತರಿಸಿ ಬೀಳತೊಡಗಿತು. ಆಳು, ದನ–ಕರ ಬಿಚ್ಚಿ ಹೊರಗೆ ಹೊಡೆದರು. ಮನೆಯಲ್ಲಿಯ ಹೆಣ್ಣುಮಕ್ಕಳ ಆಕ್ರೋಶ

ಮೊದಲಾಯಿತು. ನೀರು-ಮಣ್ಣು ಎರಚಿ, ಬೆಂಕಿಯನ್ನು ನಂದಿಸಲು ಊರವರ ಪರಿಸೆ ನೆರೆದಿತು. ಜಯನ ಮನೆಯಲ್ಲಿಯ ಜನ ಹೊಡೆದು-ಬಡಿದುಕೊಂಡು ಅಳುವಾಗ, ತಾನು ತೆಪ್ಪಗಿರುವದು ತರವಲ್ಲವೆಂದು ವಿಜಯನ ಹೆಂಡತಿ, ನಾಲ್ಕು ಸಂತಸದ ಮಾತು ಹೇಳಬೇಕೆಂದು ಅವರ ಬಾಗಿಲಿಗೆ ಬಂದಳು. ಅವಳು ಈ ಅನಾಹುತವನ್ನು ಕಣ್ಣಾರೆ ಕಂಡು ಸುಖಿಸಬೇಕೆಂದು ಬಂದ ಳೆಂದು ಜಯನ ಹೆಂಡತಿ ಭಾವಿಸಿದಳು. ಬೆಂಕಿ ನಡೆಸಿದ ಅನಾಹುತವನ್ನು ಮರೆತು ಅವಳ ಸಿಟ್ಟು ಕುರುಡಾಯಿತು. ನಾಲಗೆ ಅವಳ ಸ್ವಾಧೀನ ತಪ್ಪಿತು. ಆಕೆ ಮಾತು ಮಿಂಚಿಸಿದಳು—

"ನೋಡು-ನೋಡು. ಕಣ್ತುಂಬ ನೋಡಿ ಸುಖಾಪಡೂ. ಈ ಮನೀ ಸುಖಾ ನಿಮ್ಮ ಕಣ್ಣಾಗ ಒತ್ತುತಿತ್ತು. ದೊಡ್ಡ ಹಬ್ಬದ ಮೂರ್ತದ ಮ್ಯಾಲ ಅದಕ ಬೆಂಕೀ ಹಚ್ಚಿದಿರಿ. ಈ ಮನೀ, ದನಾ-ಕರಾ ತಿನೂ ಕೂಳಿಗೆ ಕೊಳ್ಳೀ ಹಚ್ಚಿದಿರಿ. ಮೂಕ-ಪ್ರಾಣೀ ಶಾಪಾ ನಿಮಗ ಹತ್ತದ ಹೋಗೂ ದಿಲ್ಲಾ. ಖ್ಯಾಲೀ ಮಾಡಿಸಿ, ಉಲ್ಲೂ ಮತ್ತ ಸಾಜೂಕಳ್ಹಾಂಗ ನೋಡಲಿಕ್ಕೆ ಬಂದಾಳ."

ವಿಜಯನ ಹೆಂಡತಿ ಒಂದು ತುಟಿ ಎರಡು ಮಾಡದೆ ಹಿಂದಿರುಗಿದಳು. ಜಯನ ಹೆಂಡತಿ ಆಡಿದ ಮಾತನ್ನು ಊರೇ ನೆರೆದು ಕೇಳಿತ್ತು. ಸಾಕ್ಷಿ-ಪುರಾವೆಯ ಅಗತ್ಯವೇ ಇರಲಿಲ್ಲ.

ರಾತ್ರಿಯ ಊಟದ ವೇಳೆಯಲ್ಲಿ ವಿಜಯ ಹೆಂಡತಿಗೆ ಕೇಳಿದ :

"ಅಂವನ ಹೇಣತೀ ನಿನಗೇನ ಅಂದ್ಲೂ."

"ನನಗ ಯಾರ ಏನಂದ್ರು? ಯಾರೂ ಏನೂ ಅನ್ಲಿಲ್ಲಾ. ವಿಜಯನ ಹೆಂಡತಿ ತಾನು ಜಯನ ಹೆಂಡತಿಯಿಂದ ಪಡೆದ ಬಿರುದನ್ನು ತಾನಾಗಿ ವರದಿಸುವದು ಅಸಭ್ಯಲಕ್ಷಣವೆಂದು ಸುಮ್ಮನಿದ್ದಳು.

"ನಾಲಗೀ ಬಾಯಾಗಿಟುಕೊಂಡು ಸುಮ್ಮನ ಕೂಡಲಿಕ್ಕೆ ನಿನಗ ನಾಚಿಕಿ ಹ್ಯಾಂಗ ಬರಲಿಲ್ಲಾ. ಇಂದ ಉಲ್ಲೂ ಅಂದ್ಲು. ನಾಳೆ ಹಾದರಗಿತ್ತಿ ಅಂತಾಳ. ನಿನ್ನಲ್ಲೆ ಕೋತ ಇಲದಿದ್ದರ ಇಲ್ಲಾ. ನನ ಮುಂದ ಬೊಗಳ ಬೇಕಾಗಿತ್ತು. ಬಾಯಾಗಿವ ಅಟ್ಟ ಸತ್ತದೇನು?"

ಊರಲ್ಲಿಯ ನಾರದ ವೃಂದದಿಂದ ಸುದ್ದಿ ಸಮಾಚಾರ ಸಂಗ್ರಹಿಸಿದ

ವಿಜಯ ಕಿಡಿಕಿಡಿಯಾಗಿ ಕೇಳಿದ. ಆಗಲೂ ಆ ಗರತಿ ಒಂದು ತುಟಿ ಎರಡು ಮಾಡಲಿಲ್ಲ.

ಮದ್ದು-ಪಟಾಕ್ಷಿಯ ನೆವ ಕೇವಲ. ಬಣವೆಗೆ ಉರಿಯನ್ನು ವಿಜಯನೇ ಹಚ್ಚಿಸಿರಬೇಕು—ಇದು ಅವನದೇ ಕೆಲಸವೆಂಬ ನಿಷ್ಕರ್ಷವನ್ನು ಕಿಲಾಪ-ಕುಟಿಲವೃಂದ ತೆಗೆದು ಪ್ರಸಾರಮಾಡಿತು. ಈರ್ಷೆಗೆ ಬಿದ್ದ ವಿಜಯನೂ ಯಾರೆದುರೋ ಅಂದನಂತೆ:

'ಹೌದು. ಬೆಂಕೀ ನಾನಃ ಹಚ್ಚಿಸಿದಾಂವಾ. ಯಾರ ಏನ ಮಾಢಾಂಗ ಇದ್ದಾರ'—ಏನೋ ಮಹಾ ಸಾಹಸ ಮಾಡಿದ ಕೀರ್ತಿಯನ್ನು ಪುಕ್ಕಟೆ ಪದರಿನಲ್ಲಿ ಕಟ್ಟಿಕೊಳ್ಳುವ ಆವಿರ್ಭಾವದಿಂದ ಹೇಳಿದ್ದ. ಇದನ್ನು ಕೇಳಿದವ ಜಯನ ಕಿವಿಯಲ್ಲಿ ನೇರವಾಗಿ, ಈ ಅಗ್ನಿರಸ ಸುರುವಿದ್ದ. ಜಯನಿಗೆ ಈ ವಾರ್ತೆಯನ್ನು-ಮಾತನ್ನು ಮುಟ್ಟಿಸುವ ಆಗತ್ಯವೇ ಇರಲಿಲ್ಲ. ಈಗಾಗಲೇ ಅವನಲ್ಲಿಯ ಯಕ್ಷ ರಾಕ್ಷಸರು ಸಂಶಯದ ಸಸಿಯನ್ನು ನಟ್ಟಿದ್ದರು. ಅವನ ಅರ್ಧಾಂಗಿ ಅದಕ್ಕೆ ನೀರು ಹಣಿಸುತ್ತಲೂ ಇದ್ದಳು.

ಜಯ ಯೋಚಿಸಿದ: "ಈ ಒಂದು ಬಣಿವೆ ಸುಟ್ಟರೆ, ನನ್ನ ವನಕರುಗಳೇನೂ ಕೂಳಿಲ್ಲದೆ ಸಾಯಬೇಕಾಗಿಲ್ಲ. ಇನ್ನೂ ಇಂಥ ಹತ್ತು ಬಣಿವೆ ಬಿದ್ದಿವೆ. ಆದರೇನು? ವಿಜಯ ಎಲ್ಲ ಬಿಟ್ಟು ಮೂಕ ಪ್ರಾಣಿಗಳ ಜೀವನದ ಮೇಲೆಯೇ ಕೈಮಾಡಿದನಲ್ಲ. ಧಾಬೆ ಸುಟ್ಟು ಎತ್ತು-ಕರ ಬೆಂದು ಹೋಗಬಹುದಾಗಿತ್ತು. ಅದೇ ಅವನ ವಿಚಾರವೂ ಇರಬೇಕು. ಹತ್ತಿಪ್ಪತ್ತು ಸಾವಿರದ ಪಶುಗಳ ಬಲಿಗೆ ಜಾಲ ಬೀಸಿದ್ದ. ಆಗಲಿ. ನಾನೂ ಒಂದು ಕೈ ನೋಡುವೆ." ಅವನು ಪಣ ಮಾಡಿದ್ದು ಯಾರಿಗೂ ಗೊತ್ತಾಗಲಿಲ್ಲ. ಅವನು ಗುಟ್ಟು ರಟ್ಟು ಮಾಡುವ ಗೋತ್ರದವನೂ ಅಲ್ಲ.

ನಾಲ್ಕು ತಿಂಗಳು ಸಂದರೂ ಬಣವೆ ಸುಟ್ಟಿದ್ದಕ್ಕೆ ಪ್ರತೀಕಾರವಾಗಲಿಲ್ಲ. ಜಯ ಕೈಯೂರಿದನೆಂದು ಊರಿನವರು ಭಾವಿಸಿ ನಿರಾಶರಾದರು. ಎಲ್ಲಿಯೋ ನೀರಾಡುತ್ತಿರಬೇಕೆಂದು ವಿಜಯ ತಾಡಿಸಿದ್ದ. ಸುಟ್ಟ ಬಣವೆಯ ಬೂದಿ ಅಗ್ನಿಗರ್ಭೆಯಾಗಿತ್ತು.

ಹೊಲದಲ್ಲಿ ಪೈರು ಇನ್ನೂ ಕಟಾವಿಗೆ ಬಂದಿರಲಿಲ್ಲ. ಹಿಂಗಾರಿಯ ಬೆಳೆ ತಲೆಯಲ್ಲಿ ಹಸಿರು ಹಿಡಿದುಕೊಂಡಿತ್ತು. ಬಾಟೆ ವಿಪುಲವಾಗಿತ್ತು. ದೊಡ್ಡ

ಒಕ್ಕಲುತನದವರು ಮನೆಯಲ್ಲಿ ದನ ಕಟ್ಟಿ ಒಣ ಕಣಿಕೆ ಯಾಕೆ ಹಾಕುತ್ತಾರೆ? ಅವರ ದನ-ಕರು ಈ ದಿವಸಗಳಲ್ಲಿ ಹಸಿರು ಮೆಯ್ದು ಆನೆಯಂತಾಗುತ್ತವೆ. ಜಯ ವಿಜಯರ ದನದ ಪಡೆಯೂ ಅಡವಿಯಲ್ಲಿಯೇ ಇತ್ತು.

ಒಂದು ಸಂಜೆ ವಿಜಯನಿಗೆ ವಾರ್ತೆ ಬಂತು,—ಅವನ ಕಪಿಲಾಗೋವಿನ ಮೊದಲ ತಳಿ, ೧-೧॥ ವರುಷದ ಹೋರಿ-ಕರು ನಿನ್ನೆ ರಾತ್ರಿಯಿಂದ ಕಾಣೆಯಾಗಿದೆಯೆಂದು. ವಿಜಯ ಹುಚ್ಚನಾದ. ಆಳು-ಕಾಳಿಗೆ ಬಯ್ದುದ್ದು ಹೊಡೆದದ್ದೂ ಆಯಿತು. ಕೊಂಡವಾಡೆ-ತೋಟ-ಪಟ್ಟಿ ಅಲೆದು ಹುಡುಕಿದ್ದೂ ಆಯ್ತು. ಕರದ ಪತ್ತೆಯಾಗಲಿಲ್ಲ. ಆ ಕರು ಮನೆಯವರಿಗೆಲ್ಲ ಜೀವ-ಪ್ರಾಣವಾಗಿತ್ತು. ವಿಜಯನ ಹೆಂಡತಿ ಅದಕ್ಕೆ ಕೈತುತ್ತು ಹಾಕಿ, ಹೊಟ್ಟೆಯ ಕರುಳಿನಂತೆ ಬೆಳೆಸಿದ್ದಳು. ಕಪಿಲಾಗೋವು ಮಗುವಿನ ಮುಖ ಕಾಣದೆ ಮೂಕ ಶೋಕರತವಾಗಿತ್ತು. ಅದರ ಬಟ್ಟಗಣ್ಣಿನಿಂದ ಅನಂತ ಧಾರೆಯಾಗಿ ಹರಿದ ಕಂಬನಿ ಮುಖದ ಮೇಲೆ ಇಳಿದು ಥಾಳವಾದ ಕಲೆಯನ್ನು ಕೊರೆದಿದ್ದವು. ಅದನ್ನು ಸಾಗಿಸಿ ಮನೆಗೆ ತಂದಾಗ, ವಿಜಯನ ಹೆಂಡತಿ ಅದರ ಕೊರಳಿಗೆ ಬಿದ್ದು ಬೋರಾಡಿ ಅತ್ತಿದ್ದಳು. ಎರಡು ಹೆಂಗರುಳು ತಮ್ಮ ದುಃಖ ತೋಡಿಕೊಂಡಿದ್ದವು. ಕರು ಹೋದ ಬಗ್ಗೆ ಜಯನ ಮೇಲೆ ಸಂಶಯ ತೆಗೆದುಕೊಳ್ಳಲು ಬರುವಂತಿರಲಿಲ್ಲ. ಕಾರಣ, ಅವನು ಹೆಣ್ಣುಕೊಟ್ಟ ಮಾವನಿಗೆ ಜೇರಾದ ವಾರ್ತೆ ಬಂದದ್ದರಿಂದ ಮಡದಿ ಮಕ್ಕಳನ್ನು ಕಟ್ಟಿಕೊಂಡು ಅತ್ತೆಯ ಮನೆಗೆ ಹೋಗಿ ೮-೧೦ ದಿನಗಳಾಗಿದ್ದವು. ಇಲ್ಲದಿದ್ದರೆ, ವಿಜಯ ಅವನ ಮನೆಯನ್ನು ಚಕ್ರವ್ಯೂಹದಂತೆ ಭೇದಿಸಿ ಒಳಸಾರಿ ಸೋಸಿ ನೋಡದೆ ಬಿಡುತ್ತಿರಲಿಲ್ಲ. ಕುರುಕ್ಷೇತ್ರಕ್ಕೆ ಗೋಗ್ರಹಣ ಬೀಜವಾಗುತ್ತಿತ್ತು—ತಪ್ಪಿತು.

ಮೂರು ಹಗಲು ಮೂರು ರಾತ್ರಿ ಕಳೆದವು. ವಿಜಯ ಉನ್ಮಾದಿಯಂತೆ, ಹೊಲ ಬೇಲಿ ಬಿದ್ದು ಕರುವನ್ನು ಹುಡುಕಹೊರಟವ ಮನೆಗೆ ಹಿಂದಿರುಗಲಿಲ್ಲ. ಆಳು ಕಾಳು ಹತ್ತು ದಿಕ್ಕಿನಲ್ಲಿ ಚೆದರಿ ಅದರ ಶೋಧ ನಡೆಸಿದ್ದರು. ಕಪಿಲಾ ಗೋವು, ನೀರು ಮೇವು ತೊರೆದು ನಿಲ್ಲುವ ತ್ರಾಣವನ್ನು ಕಳೆದುಕೊಂಡಿತ್ತು. ಮಂಡಿಯೂರಿದ ಮುಂಗಾಲನಡುವೆ ನಿಸ್ತೇಜ ಮುಖ ಚೆಲ್ಲಿ ಗತಪ್ರಾಣ ಸ್ಥಿತಿಯಲ್ಲಿ ಬಿದ್ದುಕೊಂಡಿತ್ತು. ದನದ ದಾವಣಿಯಲ್ಲಿ ಒಂದು ಪ್ರಾಣ ಅಂತ್ಯಕ್ಷಣದ ಎಣಿಕೆಯಲ್ಲಿತ್ತು. ಒಳಗೆ ಇನ್ನೊಂದು ಹೆಂಗರಳು—

ವಿಜಯನ ಹೆಂಡತಿ, ಅನ್ನಕಣ, ನೀರ ಹನಿಯ ಸ್ಪರ್ಶವಿಲ್ಲದೆ ಟುಕುಟುಕು ಜೀವ ಹಿಡಿದುಕೊಂಡು ಭ್ರಮಿಷ್ಠೆಯಂತೆ ಅಲೆಯುತ್ತಿದ್ದಳು. ಮನೆಯನ್ನು ಮೃತ್ಯುಚ್ಛಾಯೆ ಮುಸುಕಿತ್ತು.

ಗಂಡನ ಬರವನ್ನು ಆಲೆಗಂಣಿಂದ ನೋಡುತ್ತ ವಿಜಯನ ಹೆಂಡತಿ ಮಹಡಿಯ ಮೇಲಿನ ಕಿಟಕಿಗೆ ಸೋತು ಜೋತಿದ್ದಳು. ಆವಳಿಗೆ ಅವನು ಬರುವ-ಕರುವನ್ನು ತರುವ ಒಂದೇ ಆಶೆ; ಅದೇ ಧ್ಯಾನ. ಕಣ್ಣಲ್ಲಿ ಮಿಣುಕುವ ಜೀವದೀಪ ಅಷ್ಟು ವೈಭವ ನೋಡಿ ಆರುವ ದಾರಿಯಲ್ಲಿತ್ತು. ಆಕೆ ಹಿರಿಯ ಮಗನನ್ನು, ಕಮತಿಗನನ್ನು ಕರೆದು ಆಗಲೇ ತಿಳಿಸಿಟ್ಟಿದ್ದಳು. "ತಾನು-ಕಪಿಲಾ-ಗೋವು ಸತ್ತರೆ ಇಬ್ಬರಿಗೂ ಒಂದೇ ಚಿತೆಯಲ್ಲಿ ಅಗ್ನಿ ಸಂಸ್ಕಾರ ವಾಗಲಿ" ಎಂದು.

ಅವಳು ಸೋತ ದೇಹ, ವಿಲಿವಿಲಿಯಾದ ಜೀವ ಹೊತ್ತುಕೊಂಡು ಕಿಟಿಕಿಗೆ ಒರಗಿಕೊಂಡು ಕುಳಿತಾಗ ಅಕಸ್ಮಾತ್ತಾಗಿ ಅವಳ ದೃಷ್ಟಿ ಜಯನ ಮನೆಯ ಓತ್ತಲು ಬಾಗಿಲ ಕಡೆಗೆ ವಾಲಿತು. ಮುಚ್ಚಂಜೆಯ ಮಸಕಿನಲ್ಲಿ, ಆ ಬಾಗಲಿಗೆ ಒಳಗಿನಿಂದ ಅಗಣಿಕೊಂಡಿ ಹಾಕಿದ್ದು ಸ್ಪಷ್ಟವಾಗಿ ಕಾಣಲಿಲ್ಲ. ಬಾಗಿಲು ಮುಂಪೆ ಮಾಡಿದ್ದು ಹಾಗೇ ಇತ್ತು. ಮನೆಯ ಹೆಬ್ಬಾಗಿಲಿಗೆ ಅಂಗೈ ಅಗಲದ ಕೀಲಿ ಜಡಿದವರು ಈ ಹಿಂಬಾಗಿಲನ್ನು ಹಾಗೇ ಏಕೆ ಬಿಟ್ಟಿರಬೇಕು-ಮರೆತರೋ ಏನೋ? ಎರಡು ದಿನಗಳಿಂದ ಘೋರೆಂದು ಗಾಳಿಬೀಸುತ್ತಿದ್ದರೂ ಬಾಗಿಲು ತೆರೆದಿಲ್ಲವಲ್ಲ-ಹೊರಗಿನಿಂದ ಚಿಲಕ ಹಾಕಿದ್ದರೂ ಹಾಕಿರಬಹುದು. ಜಯ ಹಾಗೆ ಅಲಗರ್ಜಿ ಜಾತಿಯಲ್ಲ. ಅವನದೆಲ್ಲಾ ಬಂದೋಬಸ್ತಿನ ವ್ಯವಹಾರ. ಅವಳ ವಿಚಾರ ಇನ್ನೂ ನಡೆದಿತ್ತು. ಮುಚ್ಚಂಜೆಯನ್ನು ಕತ್ತಲು ಕೈಚಾಚಿ ಕಬಳಿಸಿತು. ದೀಪ ಅಲ್ಲಲ್ಲಿ ಮಿಣುಕಲನುವಾದವು. ಇವಳು ಕುಳಿತ ಕೋಣೆಯಲ್ಲಿ ಮಾತ್ರ ದಟ್ಟವಾಗಿ ಕತ್ತಲು ಹರಡಿತ್ತು. ಇಲ್ಲಿ ಇವಳು ಕುಳಿತಿರುವದರ ಕಲ್ಪನೆ ಯಾರಿಗೂ ಬರುವಂತಿರಲಿಲ್ಲ.

ವಿಜಯನ ಹೆಂಡತಿಯ ನೋಟ ಇನ್ನೂ ಆ, ಆಚೆಯ ಮನೆಯ ಹಿತ್ತಲು ಬಾಗಿಲನ್ನು ದಿಟ್ಟಿಸುತ್ತಿತ್ತು. ಆವಳು ನೋಡನೋಡುತ್ತಿರುವಂತೆ ಇಕ್ಕಿದ ಆ ಬಾಗಿಲು ಓರೆಯಾಗಿ ತೆರೆಯಿತು. ಬಾಗಿಲು ತೆರೆದು ಒಳಗೆ ನುಸುಳಿ ಬಂದ ವ್ಯಕ್ತಿ, ಮತ್ತೆ ಕದವಿಕ್ಕಿತು. ಅಗಣಿ ಎಳೆದಿತು. ಆ ವ್ಯಕ್ತಿ ಬಿಟ್ಟ

ಬ್ಯಾಟ್ರಿಯ ಮಂದ ಪ್ರಕಾಶದಲ್ಲಿ, ವಿಜಯನ ಹೆಂಡತಿಗೆ ಆ ವ್ಯಕ್ತಿಯ ಮಸುಕು ಗುರುತು ಸಿಕ್ಕಂತಾಯಿತು. ಅದರ ಈ ಚೋರ ವ್ಯವಹಾರ ವಿಸ್ಮಯಕಾರಿಯೆನಿಸಿತು. ಆಕೆ ಇನ್ನೂ ನೋಡುತ್ತಲೇ ಇದ್ದಂತೆ ಆ ವ್ಯಕ್ತಿ ಮೆಲ್ಲನೆ ನಡೆದು ಬಂದು, ಹಿತ್ತಲಲ್ಲಿಯ, ಹಳೆಯ ಸಾಮಾನು-ಸಡಿ ತುಂಬಿದ ಮುರುಕು ಕೋಣೆಯ ಬಾಗಿಲು ನೂಕಿತು. ಆ ಕೋಣೆಯ ಅಂತರಂಗವನ್ನು ಅಲುಗಿಸಿ, ಕತ್ತಲೆಯ ಆ ನೀರವತೆಯ ಎದೆಯನ್ನು ಸೀಳಿ, ಒದರುವಾಗ ಕತ್ತು ಹಿಸುಕಿದರೆ ಯಾವಬಗೆಯ ಅನುಕಂಪಯುಕ್ತ ಅಸ್ಪಷ್ಟ ನಾದ ಹೊರಬರಬಹುದೋ ಅಂಥ ವಿದೀರ್ಣ ಧ್ವನಿ....ಅಂ....ಬಾ....ಎಂದು ಹೊರಟಿತು. ಆ ದನಿ ಗಾಳಿಯಲ್ಲಿ ತೂರಿ ಬಂದಷ್ಟೇ ಒತ್ತರದಿಂದ, ಜೀವಶವವಾಗಿ ಜೋತುನಿಂತ ವಿಜಯನ ಹೆಂಡತಿ ಗಾಳಿ ಸೇರಿದವರಂತೆ, ಭೂತ ಸಂಚಾರವಾದಂತೆ, ಉನ್ಮಾದಿನಿಯಾಗಿ-ಚೇತನಾ ಸ್ವರೂಪಿಣಿಯಾಗಿ, ತನ್ನ ಮನೆಯ ಮಾಳಿಗೆ-ಗೋಡೆ ಯಾವುದರ ಪರಿವೆಯೂ ಇಲ್ಲದೆ ಒಂದೇ ನೆಗೆತದಲ್ಲಿ ಧಾವಿಸಿದಳು. ತನ್ನ, ವಿಜಯನ ಮನೆಯ ನಡುವೆ ಅಡ್ಡವಾಗಿದ್ದ ೧೦-೧೫ ಫೂಟಿನ ಎತ್ತರದ ಗೋಡೆಯನ್ನು ಒಂದೇ ನೆಗೆತದಲ್ಲಿ ಜಿಗಿದು, ಆ ಕೋಣೆಯ ಬಾಗಿಲಿಗೆ ಬಂದು-ಅಲ್ಲಿ ನಿಂತ ಜಯನನ್ನು ಬದಿಗೆ ನೂಕಿ ರಭಸದಿಂದ ಒಳಗೆ ಸಾರಿದಳು. ಬ್ಯಾಟ್ರಿಯ ಬೆಳಕಿನಲ್ಲಿ ತರಗೆಲೆಯಂತೆ ಒಣಗಿ, ಹಿಂಡಿ ಹಿಪ್ಪೆಯಾಗಿ ಬಿದ್ದ ತನ್ನ ಕರುವನ್ನು ಕಂಡಳು. ಕಂಣಂಚಿನಲ್ಲಿ ಜೀವ ಹಿಡಿದುಕೊಂಡ ಆ ಕರು ಇವಳನ್ನು ಕಂಡು "ಅಂಬಾ" ಎಂದಿತು. 'ಅಂಬಾ'—ಅವಳ ಕೂಸಿನ ಅಂತ್ಯಕರೆ ಅವಳನ್ನು ಕರೆಯಿತು. ಅದು ಅಷ್ಟರ ಸಲುವಾಗಿಯೇ ಪ್ರಾಣ ಹಿಡಿದುಕೊಂಡಿರಬೇಕು—ಅಂ....ಬಾ ಇನ್ನೊಮ್ಮೆ ಕೇಳಿಬರಲಿಲ್ಲ.

ಆ ಮೃತ ಕರುವಿನ ದೇಹದ ಮೇಲೆ ಒರಗಿ ಭೋರಿಡುವ ವಿಜಯನ ಹೆಂಡತಿಯನ್ನು ಒಂದು ನಿಮಿಷ ಮಾತ್ರ ಜಯ ನೋಡಿದ. ಅಲ್ಲಿ ನಿಲ್ಲದೆ ಉನ್ಮತ್ತನಂತೆ ಹೊರಗೆ ಧಾವಿಸಿದ. ಮನೆಯ ಹೆಬ್ಬಾಗಿಲಿಗೆ ಓಡಿ ಬಂದು, ಎರಡೂ ಕೈ ಮೇಲೆತ್ತಿ, ತನ್ನ ಆಳು-ಕಾಳುಗಳನ್ನು ಕೂಗಿ ಕೂಗಿ ಕರೆಯತೊಡಗಿದ.

"ಪರಶ್ಯಾ....ಬಶ್ಯಾ....ಶಿವ್ಯಾ, ಬರ್ರೀ, ಬರ್ರೀ ಎಲ್ಲಿದ್ದೀರಿ. ಹಾರೀ-ಗುದ್ದಲೀ ತಗೋರಿ ತಗೋರಿ ಅಂದೆ. ಖೆಡವರಿ....ಖೆಡವರಿ ಈ ಮನೀ

ನಡವಿನ ಗ್ವಾಡೀ. ಖೆಡವ್ರೋ ಅಂದೆ. ನಾ ಹೇಳತೀನಿ. ನಾ ಬ್ರಾಹ್ಮಣಾ. ಗೋಹತ್ಯಾ ಮಾಡಿದೆ. ಸ್ತ್ರೀಹತ್ಯಾ ಮಾಡಿದೆ. ಇನ್ನ ನನಗೆ ಮುಕ್ತಿ ಇಲ್ಲಾ. ಇಲ್ಲಾಂದೇ. ಈ ಗ್ವಾಡೀ–ಈ ಗ್ವಾಡೀ ಅಡ್ಡ ಆಗಿತ್ತು. ಬೀಳಲಿನ್ನ–ಖೆಡವರಿ ಅದನ್ನ." ಇಷ್ಟು ಕೂಗಿ ಹೇಳಿದವನೇ ಮತ್ತೆ ದಿಡ್ಡಿಯ ಕಡೆಗೆ ಧಾವಿಸಿದ. ಮುರುಕು ಕೋಣೆಯಿಂದ ವಿಜಯನ ಹೆಂಡತಿಯ ನಿಶ್ಚಲ ದೇಹವನ್ನು ಹೊತ್ತು ಹೊರಗೆ ತಂದು ತೊಡೆಯ ಮೇಲಿಟ್ಟುಕೊಂಡು ಧೋತರ ಚುಂಗಿನಿಂದ ಗಾಳಿ ಬೀಸ ತೊಡಗಿದ.

ಗುದ್ದಲಿ–ಹಾರಿಯ ಖಣ ಖಣಾಟದಲ್ಲಿ ಗೋಡೆಯ ಕಲ್ಲು ಕುಸಿಯ ತೊಡಗಿದ್ದವು. ಅಡ್ಡಗೋಡೆ ಭೂ–ಪತಿತವಾಗತೊಡಗಿತ್ತು.

೧-೯-೧೯೫೭

# ಚೈತ್ರ ಪಲ್ಲವ

ನರಕ ಚತುರ್ದಶಿಯ ಸಂಜೆ ಸೊಂಪಾಗಿತ್ತು. ಕೋರೆ ಚಂದ್ರ ಪಾಲಿಯಾಗಿ ಮುಗಿಲಿನಂಗಳದಲ್ಲಿ ಆದೇ ತೇಲಿಬರುತ್ತಿದ್ದ. ಮಸಕುಪ್ರಭೆ ಅಲ್ಲಲ್ಲಿ ಹರಿದುಹಂಚಿದಂತೆ ಚೆಲ್ಲಿತ್ತು. ಮನೆಯ ಮುಂದಿನ ಅಂಗಳದಲ್ಲಿ ನನ್ನ ನಾಲ್ವರೂ ಮಕ್ಕಳು ಪಟಾಕ್ಷಿ–ಢಪಲ್ ಬಾಜಿ ಹಾರಿಸುವವರಲ್ಲಿ ಹೊರ ಜಗತ್ತನ್ನು ಮರೆತು ತಾವೇತಾವಾಗಿದ್ದರು. ನನ್ನ ಹಿರಿಯ ಮಗಳು, ಹನ್ನೆರಡರ ಹೊಸ್ತಿಲಲ್ಲಿ ಇನ್ನು ಆಡಿಯಿಡುವಾಕೆ—ಉಳಿದ ಹುಡುಗರಿಗಿಂತ ಒಂದಿಷ್ಟು ಪ್ರೌಢಳಲ್ಲವೇ—ಹಾಗೆಂದು ಅವಳು ಇನ್ನಿತರ ಹುಡುಗರ ಜೊತೆಗೆ ಆಟಕ್ಕೆ ಸೇರಿರಲಿಲ್ಲ. ನಿತ್ಯ ಪರಕರ–ಪೋಲಕಾದಲ್ಲಿರುತ್ತಿದ್ದರೂ, ಇಂದು ಹಬ್ಬದ ನಿಮಿತ್ತವಾಗಿ ಪಾಚವಾರಿಯಲ್ಲಿ ಶೋಭಿಸುತ್ತಿದ್ದಳು. ಸಣ್ಣ ಕನ್ಯೆ—ಸುವಾಸಿನಿಯಾಗುವ ಸರ್ವ ಪೂರ್ವಲಕ್ಷಣಗಳನ್ನು ಮೈದಾಳಿ ನಿಂತಿದ್ದಳು. ಭುಜದಿಂದ ಉಲುಕೋಚಿಯಂತೆ ಜಾರುವ ಹೊಸ ಸೀರೆಯ ಸೆರಗನ್ನು ಮೇಲಿಂದ ಮೇಲೆ ಎತ್ತಿ, ಮತ್ತೆ ಮತ್ತೆ ಸರಿಮಾಡಿಕೊಳ್ಳುತ್ತಿದ್ದಳು. ಅಂದೇ ಬೆಳಗಿನಲ್ಲಿ ಕೊಂಡು ತಂದ ಹೊಸ ಹಣತೆಗಳಲ್ಲಿ ಎಂಣೆಬಿಟ್ಟು–ಬತ್ತಿಯಿಟ್ಟು, ಬಾಗಿಲಲ್ಲಿ ದೀಪೋತ್ಸವದ ಸಂಭ್ರಮ ನಡೆಸಿದ್ದಳು. ಬಾಗಿಲ ಮಾಡದಲ್ಲಿ, ಹೊಸ್ತಿಲ ಅಂಚಿಗೆ, ನಾಕೆಂಟು ದೀಪ ವಿರಾಜಿಸುವ ಎತ್ತುಗಡೆಯಲ್ಲಿದ್ದಳು. ಅವಳು ಹಚ್ಚಿಟ್ಟ ಹಣತೆಗಳ ಪ್ರಶಾಂತ ಪ್ರಕಾಶ ಮನೆಯ ಮುಂದಿನ ಅಂಗಳವನ್ನು ಮಾಂಗಲ್ಯದಲ್ಲಿ ಅದ್ದಿ ತೆಗೆಯುವಂತೆ ಭಾಸವಾಗುತ್ತಿತ್ತು.

ಇದೆಲ್ಲ ಸಂಭ್ರಮವನ್ನು ನೋಡುತ್ತ ನಾನು–ನನ್ನ ಮನೆಯಾಕೆ ಅಡುಗೆಯ ಮನೆಯಲ್ಲಿ ಕುಳಿತಿದ್ದೆವು. ವರುಷಕ್ಕೊಮ್ಮೆ ಬರುವ ದೀಪಾವಳಿ ತರುವಸುಖ, ಯಾವುದಕ್ಕೂ ಕಡಿಮೆಯಲ್ಲದಿದ್ದರೂ, ನಮಗೆ ಅದರಲ್ಲಿ ಇನ್ನೂ ಹೆಚ್ಚಿನ ಅಪೂರ್ವತೆ ಇತ್ತು. ಕಾರಣ, ವರುಷಾನುಗಟ್ಟಲೆ ಭಣಭಣಿಸುವ ನಮ್ಮ ಚಿಕ್ಕ ಮನೆ, ಆಗ, ದೀಪಾವಳಿಯ ಹೊತ್ತಿಗೆ ತುಂಬಿ ಡಬಡಬಿಸುತ್ತಿತ್ತು. ಇಡಿಯ ವರ್ಷ ಹೊರಗಿದ್ದ ಮಕ್ಕಳು, ಹಬ್ಬಕ್ಕೆ ಮಾತ್ರ ನಾವಿದ್ದಲ್ಲಿ ಬರುತ್ತಿ

ದ್ದರು. ನಾನು ನವಕರಿ ಮಾಡುತ್ತಿದ್ದ ಸ್ಥಳದಲ್ಲಿ ಶಿಕ್ಷಣದ ಯೋಗ್ಯ ಅನುಕೂಲತೆ ಇರಲಿಲ್ಲವೆಂದು ಹುಡುಗರನ್ನು ನನ್ನ ತಂದೆ-ತಾಯಿಗಳ ಕಡೆಗೇ ಬಿಟ್ಟಿರುತ್ತಿದ್ದೆ. ಮೂರು ತುಂಬಿ ನಾಲ್ಕರ ಮನೆಯಲ್ಲಿ ಕಾಲಿಡುವ ಪುರಸೊತ್ತು ಅಷ್ಟೇ—ಅವರಿಗೆ ನನ್ನ ಮನೆಯಿಂದ ಅಜ್ಜ-ಅಜ್ಜಿಯ ವಾತ್ಸಲ್ಯ ಮಂದಿರಕ್ಕೆ ವರ್ಗವಾಗಿ ಬಿಡುತ್ತಿತ್ತು. ಹೀಗಾಗಿ ಹುಡುಗರಿಗೆ ನಾನು "ನಾಮಕೇ ವಾಸ್ತೇ" ತಂದೆಯಾದಂತಾಗಿದ್ದೆ. ನನ್ನಾಕೆಯ ಮಾತು ಹಾಗಲ್ಲ. ಅವಳು ಹಬ್ಬ-ಹರಿದಿನಗಳ ನೆವಮಾಡಿಕೊಂಡು ಅತ್ತೆಯ ಮನೆಯ ಸರ್ಕೀಟ ಮಾಡುತ್ತಿದ್ದ ಕಾರಣ, ಮಕ್ಕಳೊಡನೆ ಅವಳಿಗಿರುವಷ್ಟು ಬಳಿಕೆ-ಸಲುಗೆ ನನಗಿರಲಿಲ್ಲ. ಮಕ್ಕಳು ನನ್ನೆದುರು ನಿಂತು ಅದು ಬೇಕು-ಇದು ಬೇಕು ಎಂದು ಎಂದೂ ನೇರವಾಗಿ ಕೇಳುತ್ತಿದ್ದಿಲ್ಲ. ನಾನು ಕಚೇರಿಯಿಂದ ಪುಕ್ಕಟೆಯಾಗಿ ತರುತ್ತಿದ್ದ, ಕಾಗದ-ಪೆನ್ಸಿಲ್, ಟಾಕು-ಮಶಿ ಬೇಡಿಪಡೆಯುವ ಆಮಿಷ ಅವರಿಗಿದ್ದರೂ ಆ ಮನವಿ ನೇರವಾಗಿ ಬರದೆ, ನನ್ನ ಶ್ರೀಮತಿಯವರ ಮುಖಾಂತರವೇ ಸಾದರಪಡುತ್ತಿತ್ತು.

ನನ್ನ ಹಿರಿಯ ಮಗಳು ಗೀತಾ, ಈಗ ದೊಡ್ಡವಳಾಗಿದ್ದಾಳೆಂದೆನಲ್ಲ, ಅಹುದು. ಅವಳಿಗೆ ತಿಳುವಳಿಕೆ ಬಂದಿದೆ. ವಯಸ್ಸಿನ ಮಾನದಿಂದ ಬುದ್ಧಿ ಹೆಚ್ಚು ಬೆಳೆದಿದೆ. ನನ್ನವರು-ತನ್ನವರು ಎಂಬ ಭೇದ ಗೊತ್ತಾಗತೊಡಗಿದೆ. ನಾನು-ನನ್ನ ಶ್ರೀಮತಿ ಏನಾದರೂ ಸಾಂಸಾರಿಕ ವಿಷಯವನ್ನು ಮಾತನಾಡುತ್ತಿದ್ದರೆ ಅದರ ಸೂಕ್ಷ್ಮವನ್ನು ಅರಿತುಕೊಳ್ಳುವಷ್ಟು ಬುದ್ಧಿ ಚಿಗುರಿದೆ. ಅದರ ಜಾಡು ಹಿಡಿದು ವರ್ತಿಸುತ್ತಾಳೆ. ಉಳಿದ ತನ್ನ ಬಂಧುವರ್ಗಕ್ಕೂ ಇದರ ಸೂಕ್ಷ್ಮವನ್ನು ತಿಳಿಸಿ ಅವರನ್ನು ತಿದ್ದಿ-ತೀಡುತ್ತಾಳೆ. ಮದುವೆಯಾಗಿ ಅತ್ತೆಯ ಮನೆಯಲ್ಲಿ ನಡೆಯಲು ಹೋದ ನನ್ನ ಅಕ್ಕ-ತಂಗಿ, ಆ ದೊಡ್ಡ ಬಳಗದಲ್ಲಿ ಆದರ್ಶ ಸೊಸೆ-ಸತಿಯರಾಗಿ ಸಾಂಸಾರಿಕರಾಗಿದ್ದಾರೆ. ಅವರನ್ನು ತಿದ್ದಿ ತೀಡಿದವರು ನನ್ನ ತಾಯಿ. ಅದೇ ಮಾನವ ಶಿಲ್ಪಿ ನನ್ನ ಮಗಳನ್ನು ಮೂರ್ತಿಯಾಗಿ ಮಾಡುತ್ತಲಿತ್ತು. ನನಗೆ, ನನ್ನ ಮಗಳ—ಗೀತಾನ ಶೈಶವ ರೂಪದಲ್ಲಿ ನನ್ನ ತಾಯಿಯ ದಿವ್ಯಶಿಲ್ಪಿಯ ವೈಭವಶ್ರೀ ಮೂಡಲನುವಾಗಿದ್ದು ಕಾಣತೊಡಗಿತು.

ತಲೆಬಾಗಿಲ ಮುಂದೆ ದೀಪ ಹಚ್ಚಿ ಮುಗಿಸಿದ ಗೀತಾ, ಒಳಗೆ ಪಡ

ಸಾಲೆಗೆ ಬಂದು ಸ್ವಿಚ್ ಹಾಕಿ ದೀಪ ಹಚ್ಚಿದಳು. ಮನೆಯು ತುಂಬ ಬೆಳಕಿನ ಹೊನಲಾಡಿತು. ಅವಳು ಹಾಗೇ ಮತ್ತೆ ತಲೆಬಾಗಿಲಿಗೆ ಹೋಗಿ, ಬಾಗಿಲಿನ ಒಂದು ಚೌಕಟ್ಟಿಗೆ ಕೈ ಎತ್ತಿಹಿಡಿದು, ಮಕ್ಕಳ ಪಟಾಕ್ಷಿಆಟವನ್ನು ನೋಡುತ್ತ ನಿಂತಳು.

ಕೇದಿಗೆಯ ವರ್ಣದ ತನುಕಾಂತಿಗೆ ಅನುರೂಪವಾಗುವಂಥ ಮುಗಿಲು ತಿಳಿನೀಲಿ ಬಣ್ಣದ ಸೀರೆಯನ್ನು ಉಟ್ಟು, ಬೀಸಾದ ಕೂದಲನ್ನು ಏಕವೇಣಿಯಾಗಿ ಹೆಣೆದುಕೊಂಡು, ಅದರಲ್ಲಿ, ಎರಡೆಲೆಯ ಅಂಗೈಯಲ್ಲಿ ಅರಳಿದ ಹೂ ಮುಡಿದುಕೊಂಡು ನಿಂತ ನನ್ನ ಮಗಳನ್ನು ನೋಡಿ ನನಗೇ ಹೊಸ ದೃಷ್ಟಿ ಮೂಡಿದಂತಾಯಿತು. ಮೊನ್ನೆ ಮೊನ್ನೆಯವರೆಗೆ ಗೀತಾ ಕೂಸಾಗಿದ್ದಳು. "ಪರಕಾರಕ್ಕ ಎರಡವಾರ ಅರಿವೆ ಸಾಕಾದೀತಲ್ಲs" ಎಂದು ನಮ್ಮಾಕೆಗೆ ಕೇಳಿದಾಗ, "ನಿಮ್ಮ ತಲೀ" ಎಂದು ಉತ್ತರಿಸಿಕೊಂಡು ನನ್ನ ತಲೆಯಲ್ಲಿಯ ಜಾಣತನದ ಪ್ರಶಂಸೆ ಮಾಡಿಸಿಕೊಂಡಿದ್ದೆ. ಆಗಲೂ ನನಗನಿಸಿರಲಿಲ್ಲ, ಇವಳು ಬೆಳೆದು ನಿಂತ ಕನ್ಯೆಯೆಂದು. ಕತ್ತರಿಯ ಕೂದಲು ಒತ್ತರ-ಹೆಣ್ಣಿನ ಬೆಳವಣಿಗೆ ಅದಕ್ಕಿಂತಲೂ ತೀವ್ರಗಾಮಿ ಎಂಬ ಕಲ್ಪನೆ, ಇಂದು ಗೀತಾನನ್ನು ನೋಡಿದಾಗ ಮಿಂಚಿತು—ಅವಳನ್ನು ನೋಡುತ್ತ, ನೋಡುತ್ತ.

"ಗೀತಾಗೀಗ ಹದಿಮೂರ ತುಂಬಿ ಹದಿನಾಕರಾಗಲ್ಲs" ಏನೋ ಆಡಬೇಕೆಂದು ಮೌನಮುರಿದು ಮಾತನಾಡಿದೆ.

"ನಿಮ್ಮ ತಲೀ" ನಮ್ಮವರು ನೇಹಮೀ ಶರಾಹೊಡೆದು "ನಮ್ಮ ಲಗ್ನ ಆಗೇ ಇನಾ ಹದಿನಾಕ ವರ್ಷ ಆಗಿಲ್ಲಾ. ಗೀತಾಗೇನ ಹದಿಮೂರ ತುಂಬತಾವ. ದೇವರs ಅಂತ ನಾಳಿನ ಕಾರಹುಣ್ಣಿವಿಗೆ ಹನ್ನೊಂದು ತುಂಬಿ ಹನ್ನೆರಡರಾಗ ಬೀಳತದ."

"ಹನ್ನೆರಡು. ಹನ್ನೆರಡು. ನಾಕಬ್ಯಾಡಾ-ಐದ ವರ್ಷದ ಮ್ಯಾಲರs ಒಂದಿಷ್ಟು ಹಾಲ್ ಚಾಲೀ ಮಾಡೂ ಕಾಳಜೀ ಹತ್ತಿತ್ತೈಲಾ." ನಾನು, ನನ್ನ—ನನ್ನ ಮಗಳ ಭವಿಷ್ಯದ ಚಿಂತೆಯನ್ನು ವ್ಯಕ್ತಪಡಿಸಿದೆ.

"ಮಾವನವರ ಕೈಕಾಲ ಘಟ್ಟಿ ಇರೂತನಕಾ ನೀವ್ ಹಾಲ-ಚಾಲೀ ಮಾಡತೀರ್ಯಾs? ಸುಂಣದ ಗ್ವಾಡೀ ಮ್ಯಾಲ ಬಟ್ಟ ಇಡತೇನಿ ಬೇಕಾರs. ಗೀತಾನ ಲಗ್ನನದಾಗ ಪುಣೋಚನಕ ಕೂತರ ಸಾಕು. ಅಷ್ಟs ಗೆದ್ದಿರಿ.

"ಅದೂ ಖರೇನಽ ಅನ್ನು. ಬೇಡಿ ಬರಬೇಕಾಗತದ ಮಗಳಽ ಇಂಥಾ ವೈಭವಾಽ. ಲಗ್ನ ಆಗಿ ಹದಿನಾಲ್ಕ ವರ್ಷ ಆದೂ. ನಿನಗೊಂದ ಶೀರೀ ಖರೀದೀ ಮಾಡಲಿಲ್ಲಾ. ಹುಡುಗೂರಿಗೇನ ಒಂದ ಗೇಣ ಅರಿವೀ, ನಂದೂ ಅಂತ ತರಲಿಲ್ಲಾ. ವರಷಕ್ಕೊಮ್ಮೆ ಊರಿಗೆ ಹೋದರಽ, ಶಾರವ್ವನೀಗೆ ಮಗಳ ಬಂದಾಳೇನೋ ಅನೂಹಾಂಗ, ನನ್ನ ಅರಿವೀ–ಅಂಚಡಿ ಬೇಜವಿೂ ಸುದ್ದೀ ಅಪ್ಪನಽ ಮಾಡತಾನ. ಬಂದ ಪಗಾರಾ ನನ್ನ ಅಂದಾಧುಂದಿಗೆ ತೂರತಿದ್ದರೂ, ಏನ ಮಾಡಿದಿ ಅಂತ ಅಂವಾ ಕೇಳಿದ್ದರ ಆಽಣಿ."

"ಹೀಂಗ ತೂರಕೋತ ನಡದೀರಂತ್ಽ ಕೈಯಾಗ ಕುಡ್ಡ–ಕವಡಿ ಉಳೀವಲ್ಲು. ಕದ್ದೂ–ಮುಚ್ಚಿ ಇಟ್ಟ, ನನ್ನ ನಾಕ ದುಡ್ಡೂ ನಿಮಗಽ ಈಡು· ಇದು ನಂದಲ್ಲಾ ಅಂತಽ, ತಿಂಗಳಾ ಒಂದ ಐದ ರೂಪಾಯಿನರಽ ಪೋಸ್ಟ ನ್ಯಾಗ ಇಟ್ಟಿದ್ರ, ಅದಽ ಹೊತ್ತು–ವ್ಯಾಳ್ಯಾಕ್ಕ ಆಗತಿತ್ತು. ಹದನೈದ ವರ್ಷ ಚಾಕರೀ ಆದ್ರೂ ಹತ್ತು ದುಡ್ಡೀನು ನಿಮ್ಮದೂ ಅಂತ ಇಲ್ಲಾ. ಇನ್ನ ಗೀತಾನ ಲಗ್ನಾ ಏನ ಮಾಡತೀರಿ ? ದೊಡ್ಡಛತ್ರದಽ ಮಾವನವರದು ಅಂತ ಎಲ್ಲಾ ಥೆಂದ ಕಾಣತದ. ಮುಂಜಾನೆ ಆರತ್ಯಾಗ ರೂಪಾಯ ಹಾಕಬೇಕಾದರ ನಿಮಗ ಕುರಿ–ಕ್ವಾಣ ಬಿದ್ದ ಹೋತೂ. ವೈಂಸಽ ಅವರಿಗೆ ಮನಿಯಾರ್ಡರ ಮಾಡಿದೇ ಅಂದರಿ. ಅದೂ ಅರೇ ಖರೇನೋ, ಏನ ಭಂಪ ಹೊಡವರ್ಯೋ ? ಇನಾ ಪಗಾರ ಆಗಲಿಕ್ಕೆ ಹದನೈದ ಇಪ್ಪತ್ತ ದಿನಾ ಅದ. ನಾಳೆ ಹಬ್ಬಾ ಮುಗಿಸಿ ಹುಡುಗರೂ ಊರಿಗೆ ಹೊಂಡೂವು. ನಾಕ ಅರಿವಿ–ಅಂಚಡೀದು, ಗಾಡೀ ಖರ್ಚಿನದು ಬೇಜಿವಿ ಮಾಡಬ್ಯಾಡೇನು ? ಮತ್ತ ಓಂ ಭವತೀ ಅಂತ ಹೊರಡೂದು....."

'ಢಡಲ್' ಹೊರಗೆ ಹುಡುಗರು ಹಾರಿಸಿದ ಢಡಲ್ ಬಾಜಿಯ ಭೀಮ ಭಯಂಕರ ಸಪ್ಪಳದಲ್ಲಿ ನಮ್ಮವರ ಮಾತಿನ ಪಟಾಕ್ಷಿಯ ಸಂಣ ದನಿ ಲೀನವಾಗಿ ಹೋಯಿತು.

"ಶ್ರೀಹರೀ .... ಶ್ರೀಹರೀ .... ಶ್ರೀಹರೀ, ನೀನೇನಪಾ" ಎಂದು ನನ್ನ ಅಸಹಾಯಕತೆಯ ಸರ್ವ ಭಾರವನ್ನು ಮನಃಪೂರ್ವಕವಾಗಿ ಆ ಶ್ರೀಹರಿಗೆ ಒಪ್ಪಿಸಿ ನಾನು ಏಳುತ್ತಿರುವಂತೆ, ನಮ್ಮವರು ತಮ್ಮ ಮಾತಿನ ಕೊನೆಯ ದಂಶ ಮಾಡಿಸಿದರು.

"ಶ್ರೀಹರೀ ಸ್ಮರಣಾ ಬ್ಯಾರೇ ವ್ಯಾಲ. ಕೈಲಾಗದವರ ಕಾಯಕೆಲ್ಲಾ ಮೈಯುಂಡಾವ, ಮಾಡೀರೇನು? ಗೀತಾ, ಹುಡುಗೂರ್ನ ಕರಕೊಂಡು ಒಳಗ ಬಾ ಇನ್ನ. ಕತ್ಲಾಯ್ತು."

ಗೀತಾ ತಲೆಬಾಗಿಲಲ್ಲಿ ಆಗಲೇ ನಿಂತಿದ್ದಾಳೆ, ಒಳಗೆ ನಡುಮನೆಗೆ ಯಾವಾಗ ಬಂದಿದ್ದಳೋ ಏನೋ? ನಮ್ಮ ಮಾತಿನಲ್ಲಿ ಅದು ನಮಗೆ ಗೊತ್ತಾಗದೇ ಹೋಗಿತ್ತು. ನಾವು ಆಡುವ ಮಾತನ್ನು ಕೇಳಿದಳೋ ಏನೋ?

ನಾನು-ನನ್ನಾಕೆ, ಇಬ್ಬರೂ ಒಬ್ಬರ ಮುಖವನ್ನೊಬ್ಬರು ನೋಡಿ ಕೊಂಡೆವು. ಏನೋ ಕಳೆದುಕೊಂಡುದನ್ನು ಕಂಣು ಅರಸುತ್ತಿರುವಂತೆ ಇಬ್ಬ ರಿಗೂ ಅನಿಸತೊಡಗಿತು.

೨

ನಾನು ಅಂಧಾಧುಂದೀ ಗೋತ್ರಜನೆಂಬುದು ಸತ್ಯ. ನನ್ನ ಹೆಂಡತಿಯ ಮಾತು ಮಾತೂ ಸತ್ಯ. ೧೫೦ ರೂ. ಸಂಬಳ ಬಂದೂ, ಐದನೇ ತಾರೀಖಿನ ನಂತರ ನನ್ನ ಕಿಸೆಯಲ್ಲಿ ಮತ್ತೆ ಗಾಳಿಯಾಟವೇ! ಉಳಿದ ೨೫ ದಿನಗಳ ನಿತ್ಯ ವ್ಯವಹಾರ ಉದ್ರಿ ಖಾತೆಯದು. ಅಂಚೆ-ತಂತಿ ಖಾತೆಯಲ್ಲಿಯ ನವ ಕರಿಯೆಂದರೆ ಧರ್ಮರಾಯನ ದೇಗುಲದಲ್ಲಿ ಒಣಒಣ ಪೂಜೆ ಇದ್ದಂತೆ. ಅಲ್ಲಿ ಯಾರೂ ಕಾಯಿ ಒಡೆಸುವದಿಲ್ಲ. ಒಣ ಊದಿನಕಡ್ಡಿಯ ಧೂಪಾರತಿ ಯನ್ನೂ ಕೂಡ ಯಾರೂ ಬೆಳಗುವದಿಲ್ಲ. ಈ 'ಸಾಚಾ'ತನದ ಒಣ ಸರ್ಟೀಫಿಕೇಟಿನಿಂದ ನಮಗೆ ಇಲ್ಲಿ ಲೌಕಿಕವಂತೂ ಇಲ್ಲವೇ ಇಲ್ಲ. ಇನ್ನು ಅಲ್ಲಿಯ ಪಾರಲೌಕಿಕ-ಛೇ ಅದು ಪರಮಾತ್ಮನ ಮರ್ಜಿಯ ಬಾಬು- ನಮಗೆ ತೀರ ಅಚಿಂತ್ಯ ವಿಷಯ.

ನಾನು, ನನ್ನ ಹೆಂಡತಿ, ಒಂದು ಮುಂಗಡಿಯ ಕೂಸು, ಇಷ್ಟು ಜನ ೧೫೦ ರೂ. ಯಲ್ಲಿ ರಾಜವೈಭವವನ್ನನುಭೋಗಿಸಿ, ೫—೧೦ ಶಿಲ್ಲಕವೆಂದು ತೆಗೆದಿಡಲು ಏನೂ ಆಯಾಸವಾಗುವಂತಿರಲಿಲ್ಲ. ಸಂಚಯ-ಸಂಗ್ರಹ ವಿಚಾರ ನನ್ನ ಜನ್ಮಕ್ಕೇ ಅಂಟಿ ಬಂದಿರಲಿಲ್ಲ. ಈಗ 'ಬಾ' ಎಂದರೆ ಹೇಗೆ ಬಂದೀತು?

ನನ್ನ ತಂದೆ ಒಂದು ಖಾಸಗೀ ಮಾಧ್ಯಮಿಕ ಶಾಲೆಯಲ್ಲಿ ಶಿಕ್ಷಕರಾಗಿ ದ್ದರು. "ಕಾಲೇವರ್ಷತು ಪರ್ಜನ್ಯಃ ಪೃಥಿವೀಸಸ್ಯಮಾಲಿನೀ" ಸುಕಾಲ

ದಲ್ಲಿ ಹುಟ್ಟಿಬೆಳೆದು, ನಮ್ಮ ಹಿರಿಯ ಕುಟುಂಬ ಬೆಳೆಸಿ ಬಾಳಿಸಿದ್ದರು. ಶಾಲೆಯಲ್ಲಿ ನಮಗೆ ಫೀ ಇರಲಿಲ್ಲ. ವಿನಾಮೂಲ್ಯ ಶಿಕ್ಷಣಪಡೆದು ಮ್ಯಾಟ್ರಿಕ್ಕಿನ ಘಾಜೆಗಟ್ಟೆ ಮುಟ್ಟಿದೆವು. ನಾಕು ಜನ ಹೆಂಣುಮಕ್ಕಳ ಮದುವೆ, ಬಸಿರು-ಬಾಣಂತಿತನದಲ್ಲಿ ಜಗ್ಗಿ-ನುಗ್ಗಾದ ಅವರಿಗೆ ನಮ್ಮ ಕಾಲೇಜ ಶಿಕ್ಷಣದ ವೆಚ್ಚವನ್ನು ಹೊರುವ ಸಾಮರ್ಥ್ಯ ಉಳಿಯಲಿಲ್ಲ. "ನಾನು ಇಷ್ಟು ಮಾಡಿದೆ. ಇನ್ನಷ್ಟು ನೆರವಾಗುವ ಸಾಮರ್ಥ್ಯವನ್ನು ದೇವರು ನನಗೆ ಕೊಡಲಿಲ್ಲ. ನೀವು ಸಮರ್ಥರಾಗಿರಿ. ಮಕ್ಕಳು-ಮರಿಗೆ ಉಚ್ಚಶಿಕ್ಷಣ ಕೊಡಿಸಿರಿ. ಆ ಸಮಾಧಾನವೇನೂ ಸಂಣದಲ್ಲ" ಎಂಬ ಗಾಯತ್ರಿ ಹೇಳಿದರು. ಅಂದು ಅಸ್ತು ಹೇಳಿದ ನಾವು ನಾಲ್ಕು ಜನ ಅಂಣ-ತಮ್ಮಂದಿರು ಎಲ್ಲೆಂದರೆ ಅಲ್ಲಿ ನವಕರಿಗೆ ಸೇರಿ ಅನ್ನಕ್ಕೆ ಹತ್ತಿದೆವು. ಹಿರಿಯರಾದ ನನ್ನಿಬ್ಬರು ಅಂಣಂದಿರು ರೆವ್ಹಿನ್ಯೂ ಖಾತೆಯಲ್ಲಿದ್ದರು. ಒಬ್ಬ ಸಂಣ ತಮ್ಮ ಮೊನ್ನೆ ತಾನೇ ರೇಲ್ವೆಯಲ್ಲಿ ಚಾಕರಿಗೆ ಸೇರಿಕೊಂಡಿದ್ದ. ನಾನು ಅಂಚೆಯ ಖಾತೆಯಲ್ಲಿ, ಬರಡು ಎಮ್ಮೆ ಹಾಲು-ಹೈನ ಕೊಡದಿದ್ದರೂ ಗೃಹಶುದ್ಧಿಯ ವೆಚ್ಚದ ಬಾಬು ತೀರಿಸುತ್ತಿದೆಯಲ್ಲ—ಅಷ್ಟೇ ಸಮಾಧಾನವೆಂದು, ಈ ಖಾತೆಯಲ್ಲಿ ಹದಿನೈದು ವರುಷದಿಂದ ಥೀಕುತ್ತ ಸಾಗಿದ್ದೆ.

ನನಗೆ ಆಗೀಗ ಆಗುವ ಬದಲಿಯ ತೊಂದರೆಯಿಂದ, ನಾನು ಮಕ್ಕಳು-ಮರಿಯನ್ನು ನನ್ನ ತಂದೆ-ತಾಯಿಗಳ ಕಡೆಗೇ ಬಿಟ್ಟಿರುತ್ತಿದ್ದೆ. ಅವರೂ ಆಸ್ಥೆ-ವಾತ್ಸಲ್ಯದಿಂದ ನಮ್ಮನ್ನು ಬೆಳೆಸಿದಂತೆ ನನ್ನ ಮಕ್ಕಳನ್ನೂ ಬೆಳೆಸಿ-ಬಾಳಿಸುತ್ತಿದ್ದರು.

"ನಾಳೆ ಬೆಳೆದು ದೊಡ್ಡವರಾದ ಮೇಲೆ, ತಮ್ಮ ಭಾರ ತಮಗೇ ಗೊತ್ತಾಗುತ್ತದೆ. ಕಲಿಸುವ ಅಗತ್ಯವೇ ಇಲ್ಲ. ನಾನು ಇರುವ ತನಕ—ನನ್ನ ಕೈ ನಡೆಯುವ ತನಕವಂತೂ ಯಾವುವಕ್ಕೂ ದದಾತಿಯಾಗಗೊಡುವದಿಲ್ಲ."

ನಮ್ಮ ತಂದೆಯ ಈ ಭಿಷ್ಮ ಭರವಸೆಯನ್ನು ಕೇಳಿ ಕೇಳಿಯೇ ಬೆಳೆದು ಬಂದಿತ್ತು ನನ್ನ ಸುಖದ ಪಿಂಡ. ಚಿಲ್ಲರೆ ತೊಂದರೆ ಬಂದರೆ-ಅದೂ ಆಗೀಗ-ಕಡಿದಲ್ಲಿ ತುರುಸಿಕೊಂಡಂತೆ ಮಾಡಿ ನಿವಾರಿಸಿಕೊಳ್ಳುತ್ತಿದ್ದೆ. ಆದರೆ ಈ ಸಲ ದೀಪಾವಳಿಯ ಹೊತ್ತಿಗೆ ಕಡಿದದ್ದು ಬರಿಯ ಒಂದು ಸೊಳ್ಳೆಯಾಗಿರದೆ ದೊಡ್ಡ ಕೆಂಜಗವೇ ಆಗಿತ್ತು.

ತಿಂಗಳ ಮಧ್ಯದಲ್ಲಿಯೇ ಹಬ್ಬ ಬಂದು ಬಿಟ್ಟಿತು. ಆಷ್ಟು ಹೊತ್ತಿಗೆ ನನ್ನ ಕಿಶೆ ಖಾಲೀಯಾಗಿ ಹಳೆಯ ಮಾತಾಗಿತ್ತು. ಹಬ್ಬಕ್ಕೆ ಬೇಕಾಗುವ ಸಾಮಾನು-ಸಡಿಯನ್ನು ವಾಡಿಕೆಯಂತೆ ಖಾತೆಯ ಅಂಗಡಿಯಲ್ಲಿ ತಂದದ್ದಾಯಿತು. ಈ ಸಾಮಾನುಗಳನ್ನು ಉದ್ರಿ ಕೊಡಲು ಎಂದೂ, ಯಾವ ಅಂಗಡಿಕಾರನಿಂದಲೂ ನಕಾರ ಬಂದುದಿಲ್ಲ. ಕಾರಣ, ಅವರಿಗೆ ಗೊತ್ತು, ಒಂದನೇ ತಾರೀಖಿಗೆ ಲೆಕ್ಕ ಚುಕ್ತಾ ಆಗುವದೆಂದು. ಆದರೆ ಬಂದ ಸಂಕಟ, ಆರತಿಯಲ್ಲಿ ಹಾಕಬೇಕಾದ ಹಣದ ಜೋಡಣೆಯದು. ನನ್ನ ಅಕ್ಕ-ತಂಗಿಯರಿಗೂ ಆರತಿಯ ಹಣ ಕಳಿಸಬೇಕು. ಕನಿಷ್ಠ ೪೦-೫೦ ರೂ. ಗಳಾದರೂ ಬೇಕು. ವರುಷಕ್ಕೊಮ್ಮೆ ಬರುವ ಹಿರಿಯ ಹಬ್ಬದ ಕಳೆ—ಇಷ್ಟು ಹಣ ನಾನು ಜೋಡಿಸಿಕೊಳ್ಳದಿದ್ದರೆ—ಕಾಂತಿಹೀನವಾಗುತ್ತದೆ. ಒಂದು ಕರ್ತವ್ಯಚ್ಯುತಿಯ ಈಟಿ ವರ್ಷಂಪ್ರತಿ ತಿವಿಯುತ್ತದೆ. ಏನೇ ಆಗಲಿ, ಹಣ ಹೊಂದಿಸಿಕೊಳ್ಳದೆ ಗತ್ಯಂತರವಿಲ್ಲ. ಆದರೂ ಏನು ಮಾಡುವದು ಎಂಬ ಸಮಸ್ಯೆ ಪೆಡಂಭೂತವಾಗಿ ಎದುರು ನಿಂತಿತು.

ಇಷ್ಟು ದೊಡ್ಡ ಮೊತ್ತ ಯಾರು ಕೊಡುತ್ತಾರೆ? ಅಂಚೆಯ ಖಾತೆಯಲ್ಲಿ ಎಲ್ಲರೂ ನನ್ನಂತೆಯೇ ಸುದಾಮನ ಒಕ್ಕಲು. ಮೇಲಾಗಿ ಆ ಊರಿಗೆ ನಾನು ಬದಲಿಯಾಗಿ ಬಂದು ೨-೩ ತಿಂಗಳಾಗಿತ್ತಷ್ಟೇ! ಬಾಯಿಬಿಟ್ಟು ಕೇಳಿ ಪಡೆದುಕೊಳ್ಳುವಂಥ ಪರಿಚಯವಾದರೂ ಇರಲಿಲ್ಲ. ಅಲ್ಪ ಪರಿಚಯಸ್ಥರಲ್ಲಿ ಇಂಥ ಪ್ರಸ್ತಾಪ ಅಪಮಾನಕರ. ನನಗೆ ತೀರ ಪರಿಚಯದ ಒಬ್ಬನೇ ಒಬ್ಬ ವ್ಯಕ್ತಿಯೆಂದರೆ, ನಮ್ಮ ಕಚೇರಿಗೆ ಚಹ ಪೂರೈಸುವ ಹನುಮದ್ವಿಲಾಸದ ವೆಂಕಟರಮಣ ಭಟ್ಟ. ನೀನೇ ಸಂಕಟಹರಣನೆಂದು ಅವನಿಗೆ ಶರಣಾಗತನಾಗದೆ ಗತ್ಯಂತರವಿರಲಿಲ್ಲ. ಅಂತೂ ಜೀವ ಕೈಯಲ್ಲಿ ಹಿಡಿದುಕೊಂಡು ಅನುನಯದ ದನಿಯಲ್ಲಿ ಪ್ರಸ್ತಾಪಮಾಡಿದೆ. ಕೊಟ್ಟ ಹಣ ಮುಣುಗುವದಿಲ್ಲವೆಂಬ ಧೈರ್ಯ ಬಲವಾಗಿದ್ದರೂ ಇಷ್ಟು ಹಣವನ್ನು ಈಗ ಕೊಡಬೇಕಾಗುವದಲ್ಲವೆಂಬ ಕಹಿ ಭಾವನೆಯನ್ನು ಮುಖದಲ್ಲಿ ಢಾಳವಾಗಿ ಮೂಡಿಸಿ "ಶೈಲಾಕ ಮಾತ್ರ ತಪ್ಪದ ತಿರಿಗಿ ಕೊಡರಿ. ಚಹಾದ ಲೆಕ್ಕದ ಉದ್ದರೀ ಬೇಕಾರ ಮುಂದಿನ ಸಾರೆ ಚುಕ್ತಾಮಾಡೀರಂತ." ಅವನ ಈ ಔದಾರ್ಯ ನನಗೆ ಪ್ರಾಣಸಂಕಟವೆನಿಸಿತು. ಆಚು ನನಗಿತ್ತು—ಆದರ ಅಗತ್ಯ ವೆಂಕಟರಮಣನಿಗಿರಲಿಲ್ಲ.

ಅವನ ವಿಷಮಾತ್ರೆಯನ್ನು ಗಂಟಲಲ್ಲಿ ನಿರಾಯಾಸವಾಗಿ ನೂಕಿ ೪೦ ರೂ. ಗಳನ್ನು ಪಡೆದುತಂದಿದ್ದೆ. ಯಥಾಪ್ರಕಾರ ಇವರ ಸಾದ್ಯಂತ ಕತೆಯನ್ನು ಶ್ರೀಮತಿಗೆ ನಿವೇದಿಸಿದ್ದೆ. ಅವಳು ಒಂದು ತುಟಿ ಎರಡು ಮಾಡಲಿಲ್ಲ. ಹೆಂಣು ಸರ್ವಂಸಹೆ. ನನ್ನ ಹೆಂಡತಿ ಇದಕ್ಕೆ ಹೇಗೆ ಹೊರತಾದಾಳು ?

ಅಕ್ಕನ ತದಿಗೆಯ ದಿನ ಮಧ್ಯಾಹ್ನದ ಊಟ ಮುಗಿಸಿ ನಾನು ನಡು ಮನೆಯಲ್ಲಿ ಹಾಸಿಗೆ ಬಿಚ್ಚಿ ಅಡ್ಡಾಗಿದ್ದೆ. ಕಚೇರಿಗೆ ಬಿಡುವಿರದಿದ್ದರೂ ಅಂದು ರಜೆ ಪಡೆದುಕೊಂಡಿದ್ದೆ. ದುಡಿತದ ಯಾತಾಯಾತವಿರಲಿಲ್ಲ. ಊಟವೂ ಜಡವಾಗಿದ್ದರಿಂದ ಕಂಣು ತಂತಾನೇ ಮುಚ್ಚತೊಡಗಿದ್ದವು. ಯಾವಾಗ ನಿದ್ದೆ ಹತ್ತಿತ್ತೋ ಅದೂ ಗೊತ್ತಾಗಲಿಲ್ಲ. ಸುಮಾರಾಗಿ ಮಲಗಿರ ಬೇಕು. ಕಂಣು ಬಿಟ್ಟು ಗಡಿಯಾರದ ಕಡೆಗೆ ನೋಡಿದಾಗ ೩॥ ಗಂಟೆಯಾ ಗಿತ್ತು. ಇಷ್ಟು ಬೇಗನೆ ಎದ್ದಾದರೂ ಮಾಡುವದೇನೆಂದು, ಹಾಗೇ ಕಂಣು ಮುಚ್ಚಿಕೊಂಡು ಹಾಸಿಗೆಯ ಮೇಲೆ ದೇಹ ಚೆಲ್ಲಿ ಬಿದ್ದುಕೊಂಡೆ.

ಪಡಸಾಲೆಯಲ್ಲಿ ನನ್ನ ಮಕ್ಕಳ ಪರಿಷೆ ನೆರೆದಿರಬೇಕು. ಆಡುವ ಮಾತಿನ ದನಿ ಕೇಳಿದರೇ ಗೊತ್ತಾಗುವಂತಿತ್ತು, ಸರ್ವಸಂತಾನಶ್ರೀಯು ಅಲ್ಲಿ ಮೇಳವಿಸಿದೆಯೆಂದು.

“ಗೀತಕ್ಕಾ, ಮೂರೂವರಿ ಆತು. ದಾದಾನ್ನ ಎಬ್ಬಿಸಲೇನು ? ಇಂದ ಅಂಗಡೀಗೆ ಹೋಗೂಣಂದಿದ್ದಾ. ನನಗೆ ಬುಶ್ ಕೋಟು, ಕಿಟ್ಟ್ಯಾಗ ಮಂಕೀ ಕ್ಯಾಪ್, ಸುಮಾಗ ಝುಬಲಾ ತರೂದದ ಅಂತ ಹೇಳ್ಯಾನ. ಮತ್ತ ನಾವ್ ಲಗೂನ ಊರಿಗೆ ಹೋಗಾವ್ರು. ಇಂದ ಆರಿವಿ-ಗಿರಿವೀ ತಂದ ಬಿಡೂಣು. ಹೌದಲ್ಲಪಾ ಕಿಟ್ಟ್ಯಾ”

ನನ್ನ ಮೂರನೇ ಮಗ ಗೋಪಾಲ ತನ್ನ ಇತರ ಬಂಧು-ಭಗಿನಿಯರ ಬೇಡಿಕೆಯನ್ನು ಮಂಡಿಸಿ, ಕಿಟ್ಟ್ಯಾನ ಸಾಕ್ಷಿ ಕೇಳಿದ.

“ಹೌದ ಗೀತಕ್ಕಾ, ಚಹಾ ಕುಡದು ಹೊರಡೂದಂದ್ರ ಅಲ್ಲಿಗೇ ಬರ ತದ. ಮತ್ತ ಹಂಗ ಸಿನೇಮಾಕ್ಕೂ ಹೋಗೂದದ.” ನನ್ನ ಎರಡನೇ ಮಗಳು ಸುಮಾ ಅನುಮೋದಿಸಿದಳು.

“ಸುಮಾ, ಗೋಪೀ, ಕಿಟ್ಟಾ, ಪುಟ್ಟಪುಟ್ಟ ಹುಡುಗೂರ್ಯಾ, ಏನ ಲಟ್ಟ ಲಟ್ಟ ಮಾತಾಡತೀರ್ರೋ ? ಲಟಾಲಟಾ ಮುದ್ದ ಕೊಡಬೇಕಂತ ಅನಸ್ತದ.

ನಾ ಹೇಳತೀನಿ, ಹಾಂಗ ಕೇಳಿದಿರೀ ಅಂದ್ರಽ, ಸುಮಾ, ನಿನಗ ರಿಬಿನ, ಗೋಪೀ ನಿನಗ ಬುಶ್ ಕೋಟು; ಕಿಟ್ಟ್ಯಾಽ, ನಿನಗ ಪಂಚೀ ಕ್ಯಾಪ. ಯಾರ ಕೇಳತೀರಿ–ಕೈ ಮ್ಯಾಲ ಎತ್ತರಿ. ಹೂಂ, ಸಟ್ಟನಽ ಎತ್ತಬೇಕ ಅದಽ."

"ನಾ ಕೇಳತೀನಿ, ನಾ ಕೇಳತೇನಿ. ಇದ್ನೋಡು ಗೀತಕ್ಕ, ಗೋಪೀಕಿಂತಾ ನಂದಽ ಕೈ ಮ್ಯಾಲಽ. ನೋಡು, ಸುಮಾ ಒಂದಽ ಕೈ ಮ್ಯಾಲ ಎತ್ತ್ಯಾಳ. ನನ್ನ ಎರಡೂ ಕೈ."

"ಶಹಬ್ಬಾಶ್! ಇನ್ನ ಕೈ ಬಿಡ್ರಿ ತೆಳಗ. ಹೀಂಗ ಕೂಡ್ರಿ ನೋಡೋಣ: ಸಾಲಕ್ಕಽ. ಮೊದಲ ಸುಮಾ, ಆಮ್ಲಿಂದ ಗೋಪಾಲಾ, ನೀ ಕಿಟ್ಟೀ–ಪುಟ್ಟಮಾವೀ ಕಟ್ಟಕಡೀಕೆ. ಹಾಂ, ಹಾಂಗ ಅಂದೆ. ಇದ್ನೋಡು ಕಿಟ್ಟ್ಯಾ, ನಿನ್ನ ಪಾಳೀ ಮೊದಲ–ನೀ ಉತ್ತರಾ ಹೇಳಬೇಕು, ನಾ ಕೇಳಿದ್ದಕ್ಕ. ತಿಳೀತಿಲ್ಲೋ? ನಾವ್ ಊರಿಂದ ಬಂದೇವಲ್ಲಪಾ ಅವತ್ತಽ, ನೆನಪದನೋ ಇಲ್ಲೋ?"

"ಆಗದೀ ನೆನಪಿನ್ಯಾಗ ಅದಽ, ಹೌದು. ಬಸ್ಸಿನ್ಯಾಗ ಹ್ಯಾಂಗ ಕಿಸ್ತಾ ಕೂತಿದ್ದೆ ಡ್ರೈವ್ಹರನ ಹತ್ತೀಲೇ."

"ನೋಡು ಹ್ಯಾಂಗ ಎಲ್ಲಾ ಪಾಂಕ್ತ ಆಗಿ ನೆನಪಿನ್ಯಾಗ ಇಟಗೊಂಡೀ. ನಮ್ಮ ಪುಟ್ಟಮರೀಽ ಏನೂ ಮರೆಯೂ ಹಾಂಗಿಲ್ಲಾ. ಬರಾಗ ಏನ ಮಾಡಿದಿ, ಗೋಪೀ, ನೀ ಹೇಳ ನೋಡೂಣು."

"ನಾ ಅವ್ವಗ–ಕಾಕಾಗ ನಮಸ್ಕಾರ ಮಾಡಿದೆ." (ಅವ್ವ ನನ್ನ ತಾಯಿ, ಕಾಕಾ ನನ್ನ ತಂದೆ. ನಾವು ಅವರನ್ನು ಹೀಗೆ ಸಂಬೋಧಿಸುತ್ತಿರುವದನ್ನು ಹುಡುಗರೂ ರೂಢಿಸಿಕೊಂಡಿದ್ದರು.)

"ಅವ್ವ ಏನಂದ್ಲಪಾ?"

"ಆಯುಷ್ಯವಂತ ಆಗು, ಹಟಾ ಮಾಡಬ್ಯಾಡಾ, ಊರಿಗೆ ಹೋದ ಮ್ಯಾಲ ದಾದಾಗ, ತಾಯೀಗೆ ತ್ರಾಸ ಕೊಡಬ್ಯಾಡಾ, ಅಂದ್ಲು."

"ಆಗದೀ ಬರೋಬರೀ ಹೇಳಿದಿ ನೀನು. ಕಾಕಾ ಏನೇನ ಹೇಳಿದರು. ನೀ ಹೇಳ ನೋಡೂಣು ಸುಮಾ."

"ಕಂಡಕಂಡದ್ದು ಬೇಡಿ ಹಟಾ ಮಾಡಬಾರದು. ಸುಮಾ ಏನ ಶಾಣ್ಯಾಕಾಗ್ಯಾಳ ಹುಡಿಗಿ ಅಂದಿರಬೇಕು ಎಲ್ಲಾರು,– ಹಾಂಗ ಇರಬೇಕು ಅಂದ್ರೊ."

"ಎಲ್ಲಾರು ಪೈಲಾನಂಬರ ಪಾಸ್. ಊರಿಗೆ ಹೋದ ಕೂಡಲೇ ಕಾಕಾಗ ಹೇಳತೀನಿ. ಸುಮಾಗ ರೇಶಿಮೀ ಝುಬಲಾ, ಗೋಪೀಗೆ ಮಸ್ತ ಬುಶ್-ಕೋಟು, ಕಿಟ್ಟಣ್ಣಾ, ನಿನಗ ಛೆಂದಂಥಾ ಮಂಕೀ ಕ್ಯಾಪು. ಈ ಊರಾಗೇನ ಒಂದ ಛಲೋ ಝುಬಲಾ ಸಿಗೂಹಾಂಗಿಲ್ಲಾ. ಬುಶ್-ಕೋಟಂತೂ ಮೊದಲಃ ಇಲ್ಲಾ. ಸುಳ್ಳೇ ರೊಕ್ಕ ದಂಡಾ. ಆರತೀ ರೂಪಾಯಿ ಅವ ನೋಡ್ರೀ, ದಾದಾ ಕೊಟ್ಟದ್ವು—ಅವನ್ನ ತಗೊಂಬೂದು. ಊರಿಗೆ ಹೋದ ಮ್ಯಾಲ ಛೆಂದ ಛೆಂದ ಸಾಮಾನಾ ತರೂದು, ನಮ್ಮ ಶೇಡಜೀ ಅಂಗಡ್ಯಾಗಿಂದ. ಅಂವಾ—ಸುಮಾ, ನಿನಗ ರಿಬ್ಬನ್ ಕೊಡತಾನ. ಗೋಪಿಗೆ ರಟ್ಟಿನ ಡಬ್ಬೀ ಕೊಡತಾನ. ನಿನಗ ಚಾಕಲೇಟ ಕೊಡತಾನ—ಹೌಂದಲ್ಲೋ ಕಿಟ್ಟೀ."

"ಹೌದು. ಹೌದು....ಹೌದು." ಏಕಕಾಲದಲ್ಲಿ ತ್ರಿಕಂಠ ನಿನದಿಸಿದವು.

"ಮತ್ತ, ಇನ್ನೊಂದು ಮಜಾ ಮಾಡೂದು ಸುಮಾ. ಯಾರಿಗೂ ಹೇಳಬಾರದಾಃ—ಅಗದೀ ಗುಪಿತ ಇಡಬೇಕು—ತಿಳೀತೇನು? ಇದ್ನೋಡು, ಮೊನ್ನೆ ಆರತೀ ಒಳಗ ದಾದಾ ರೂಪಾಯಿ ಹಾಕಿದರು. ಹೌದಲ್ಲೋ? ನಾವ್ ಆರತೀ ಮಾಡಿದೇವೂ ಅಂತ ಅವರ ರುಪಾಯಿ ಹಾಕಿದರು. ತಾಯೀ ಯಾರಿಗೆ ಆರತೀ ಮಾಡಿದ್ಲಪಾ. ಆಕೀಗೆ ಯಾರರೆ ರುಪಾಯಿ ಕೊಟ್ಟರೇನು? ಆಕೀ ಸುಮ್ನನಃ ನೋಡಕೋತ ನಿಂತಿದ್ಲು ಹೌದಲ್ಲೋ? ಆಕಿಗೂ ಯಾರರಃ ರುಪಾಯಿ ಕೊಡಬೇಕೂ ಅಂತ ಅನಸೂದಿಲ್ಲೇನು? ಅದಕ ನಾವೇನ ಮಾಡೂಣಂದೀ: ಇಂದ ರಾತ್ರೀ, ರಂಗೋಲಿ, ಮಣೀ ಎಲ್ಲಾ ಹಾಕಿ ಶಿಸ್ತ ಮಾಡೂಣು. ತಾಯೀಗೆ ಹೇಳೂಣಂತ, ನೀ ಹೊಸಾ ಸೀರಿ ಉಟಕೋ; ನೋಡ್ಯರಃ ನೋಡು—ಏನ ಮಜಾ ಆಗತದಂತ, ಆಕೀಗೆ ಹೇಳೂಣಂತ—ಇಂದ ನೀ ನಮಗ ಆರತೀ ಮಾಡು, ಅಕ್ಕನ ತದಿಗಿ ಅದಃ ಅಂತ! ಆಕೀ ಆರತೀ ಮಾಡಿದ ಕೂಡಲೇ, ಮೊನ್ನೆ ನಮಗ ಬಂದಾವಲಾ ಆರತ್ಯಾಗ ರೂಪಾಯಿ, ಅವನ್ನಃ ತಾಯೀ ಆರತ್ಯಾಗ ಹಾಕೂಣಂತ. ಮಜಾ ಆಗತದೋ ಇಲ್ಲೋ? ಆಕೀ ದಾದಾಗ ಹೇಳಲಿ: ನನ್ನ ಗೋಪಿ, ಕಿಟ್ಟಾ ನನಗ ಆರತ್ಯಾಗ ರುಪಾಯಿ ಹಾಕಿದರಂತ. ಊರಿಗೆ ಹೋದಮ್ಯಾಲ, ಅಪ್ಪಗ—ಕಾಕಾಗ ಹೀಂಗ ಮಾಡಿದೇವು ಅಂತ ಹೇಳೂದು. ಶಹಬ್ಬಾಶ್! ಪುಟ್ಟಮರೀ ಅಂದರ,

ಹೀಂಗ ಇರಬೇಕು ಅಂತs, ಕಾಕಾ ಕಿಟ್ಟಣ್ಣನ್ನ ಕಣಿಸ್ಯಾಡಿ ಬಿಡತಾರ. ಹೌದಲ್ಲ ಸುಮಾ.”

“ಹೌಂದು. ಅಗದೀ ಖರೇ! ಏ ಸುಮಾ, ನೀ, ತಾಯೀಗೆ ಒಂದ ಮಾತ ಹೇಳಬ್ಯಾಡಾಂs ಇದರಾಗಿಂದು. ನಿಂದ ಒಡಕಬಾಯಿ. ಸಟ್ಟನs ಹೋಗಿ ಹೇಳಿಬಿಡತೀ. ಆಕೀಗೆ ತಿಳೀತಂದ್ರ ಮಜಾನs ಉಳೀಯೂದಿಲ್ಲಾ. ಗೀತಕ್ಕಾ, ಛಲೋ ಹೇಳಿದಿ ನೋಡು. ಇಂದ ಹೀಂಗ ಮಾಡೇ ಬಿಡೂದು ಮತ್ತs. ಮರಿಯೂ ಹಾಂಗಿಲ್ಲಾ ”

“ಹuಂಗಾರ ಓಡ್ರಿನ್ನ ಆಡಲಿಕ್ಕೆ, ಚಹಾದ ಹೊತ್ತಿನತನಕಾ. ನಾ ಕರದ ಕೂಡಲೇ ಬರಬೇಕ ಮತ್ತ. ಚಹಾ ಕುಡದು, ಅರಿವೀ ಹಾಕೊಂಡ ವರs, ಲಕ್ಷ್ಮೀ ಗುಡಿಗೆ ಹೋಗೂಣು. ಬಂದಮ್ಯಾಲ ಏನದ, ನೆನಪಿನ್ಯಾಗ ಉಳೀತಿಲ್ಲೊ? ಆರತೀ....ಗವಲೀ ಪಾಯಸಾ.”

“ಹೌದು. ಚಹಾ ಆದ ಕೂಡಲೇ ಹೇಳ ಗೀತಕ್ಕಾ, ಬರತೇವು. ಇಲ್ಲೇ ಬಾಗಲದಾಗ ಆಡತಿರತೇವು.” ಇಷ್ಟು ಹೇಳಿ ಹುಡುಗರು ಆಡಲೆಂದು ಅಂಗಳಕ್ಕಿಳಿದರು. ಅಷ್ಟರಲ್ಲಿ ನನ್ನ ಹೆಂಡತಿ ಅಡುಗೆಯ ಮನೆಯಿಂದ ಪಡ ಸಾಲೆಗೆ ಬಂದು ನಿಂತಿರಬೇಕು. ಗೀತಾ ಅವಳನ್ನು ಕುರಿತು ಹೇಳಿದ್ದು ಕೇಳಿಸಿತು:

“ತಾಯೀ, ಹುಡುಗೂರ್ನ ರಂಬಿಸಿದೆ. ಇನ್ನೇನ ಅವರು ಅದು ಬೇಕು, ಇದು ಬೇಕು ಅಂತ ಹಟಾ ಮಾಡೂದಿಲ್ಲಾ. ಅಪ್ಪಾ-ಕಾಕಾ, ಅವರಿಗೆ ಹಟಾ ಮಾಡಬಾರದು ಅಂತ ಹೇಳಿದ್ರು, ನಾವು ಇಲ್ಲಿಗೆ ಬರೂ ಮುಂದ. ಅದನ್ನ ತಪ್ಪದ ನೆನಪಿನ್ಯಾಗ ಇಟಗೊಂಡಾರ. ಅವರಿಗೆ ಹೊಸಾ-ಅರಿವಿ-ಅಂಚಡಿ ಏನೂ ಬ್ಯಾಡಾ. ಮೊನ್ನೆ ಅತ್ತ್ಯಾ ಬಂದಾಗ ಎಲ್ಲಾರಿಗೂ ಅರಿವಿ ಹೊಲಿಸಿ ಕೊಟ್ಟಾರ. ಗೋಪಿಗಂತೂ ಇದ್ದ ಅರಿವೀನೇ ಹಾಕೋಳಾರದೆ ಪತ್ತ್ಯಾಗ ಲಿಕ್ಕೆ ಹತ್ತ್ಯಾವ. ಇಲ್ಲೇನೂ ಹೊಸಾದು ಕೊಳೂದು ಬ್ಯಾಡಾ. ಚಹಾ ಮುಗದ ಮ್ಯಾಲ ನಾ ಅವರನ್ನ ಗುಡೀ ಕಡೆ ಕರಕೊಂಡ ಹೋಗತೇನಿ. ದಾದಾ-ನೀನು ಇಬ್ಬರs ಇರತೀರ್ಯಲಾ. ದಾದಾಗ ನೀನs ಹೇಳೂ—ನಾವು ನಾಡದ ಊರಿಗೆ ಹೊರಡತೇವಂತ. ಸಾಲಿ ಬ್ಯಾರೇ ಲಗೂನೇ ಸುರೂ ಆಗೂದು. ಮೊನ್ನೆ ನೀ ಅಂತಿದ್ಯೆಲಾ ಗಾಡೀ ಖರ್ಚಿನ ದಶಿಂದ. ನಮಗ

ದಾದಾ ಅರತ್ಯಾಗ ಹಾಕಿದ ರೂಪಾಯಿ ಅವಃ ಅಲಾ ಅವನ್ನ ಕೊಟ್ಟ ಬಿಡು. ದಾದಾ ಕೇಳಿದರ, ಕಾಕಾ ಬರಾಗ ಕೊಟ್ಟಿದ್ರು–ಊರಿಂದ ಬಂದ ಕೂಡಲೇ ಗೀತಾ ನನ್ನ ಕಡೆ ಕೊಟ್ಟಿದ್ಲು ಅಂತ ಹೇಳಿಬಿಡು. ದಾದಾನ ಹತ್ತೀಲ್ಯರೇ ಈಗ ಎಲ್ಲೀವ ಬರತಾವ ರೂಪಾಯಿ. ಸುಮ್ನಃ ಅಂವಗ ತ್ರಾಸ ಕೊಡುದು ಬ್ಯಾಡಾ."

ನನ್ನ ಹೆಂಡತಿ ಗೀತಾನನ್ನು ಎದೆಗವಚಿಕೊಂಡು ಮುಳುಮುಳು ಅಳುವ ಅಸ್ಪಷ್ಟ ದನಿಯುಷ್ಟು ಕೇಳಿ ಬಂತು. ಆ ದಿವ್ಯ ದೃಶ್ಯವನ್ನು ನೋಡುವ–ಕಣ್ಣಾಪಾರಣೆಯನ್ನು ಮಾಡಿಕೊಳ್ಳುವ ಪುಣ್ಯವನ್ನು ನನ್ನ ಕಣ್ಣು ಪಡೆದು ಬಂದಿರಲಿಲ್ಲ. ಮೂಕ ಸಾಕ್ಷಿಯಾಗಿ — ಎಲ್ಲವನ್ನೂ — ನೋಡದಿದ್ದರೂ ಕೇಳುತ್ತಿದ್ದ.

* * * * *

ಹುಡುಗರು ಊರಿಗೆ ಹೊರಟು ನಿಂತಿದ್ದರು. ಬಸ್ಸಿನಲ್ಲಿ ಅವರು ಕುಳಿತೆಡೆಯ ಕಿಟಕಿಯಲ್ಲಿ ಅರೆ ಅರ್ಧ ಮುಖಚಾಚಿ ನಮ್ಮ ನಿರೋಪ ತೆಗೆದುಕೊಳ್ಳುತ್ತಿದ್ದರು. ನಾಲ್ಕು ಹುಡುಗರ ಆ ಎಂಟು ಕಣ್ಣಾಲಿಗಳಲ್ಲಿ ಅಗಲಿಕೆಯ ವ್ಯಥೆ ಮಡುವುಗಟ್ಟಿ ನಿಂತಂತಾಗಿತ್ತು. ಗೀತಾನ ಡಬಡಬಿಸುವ ಕಣ್ಣಿಗೆ ನಾವು ಕಾಣುತ್ತಿದ್ದೆವೋ ಇಲ್ಲವೋ !

" ಗೀತಾ, ಹೋಗಿ ಬಾಃ ಅಂಃ."

" ದಾದಾ....ತಾಯೀ...."

ಆ ಕೂಸಿನ ದುಃಖ ಅಪಾರವಾಗಿತ್ತು. ಮುಂದೆ ಮಾತು ಹೊರಡಲಿಲ್ಲ. ಇನ್ನೂ ಅವಳ ದುಃಖ ಶಮನವಾಗಿರಲಿಲ್ಲ, ಮೋಟಾರು ಬಿಟ್ಟಿತು. ಪ್ರಯಾಸದಿಂದ ಅವಳು ಹೊರಗೆ ಹಣಿಕಿಕ್ಕಿ ಕೈ ಬೀಸಿದಳು. ಕಂಬನಿ ಇನ್ನೂ ತೊಟ್ಟಿಕ್ಕುತ್ತಿತ್ತು.

ಈ ರತ್ನ ಇಲ್ಲಿಯ ವಸ್ತುವಲ್ಲೆಂದು ನಾನು ಧೇನಿಸುತ್ತಿರುವಾಗಲೇ ಮೋಟಾರು ಮರೆಯಾಯಿತು.

ಅವನತಮುಖರಾಗಿ ನಾನು–ನನ್ನಾಕೆ ಮನೆಯ ಕಡೆಗೆ ಕಾಲೆಳೆದುಕೊಂಡು ಸಾಗಿದೆವು.

೨೯-೯-೧೯೫೭

ಲಲಿತ ಸಾಹಿತ್ಯಮಾಲೆಯಲ್ಲಿ

# ಬೇಗನೆ ಬರಲಿವೆ !

೧) ಆಷಾ
—ರೈಡರ್ ಹ್ಯಾಗಾರ್ಡನ ಕಾದಂಬರಿಯ ಅನುವಾದ

೨) ಹೆಣ್ಣಿನ ಬಾಳು
—ಮೊಪಾಸಾ ಕಾದಂಬರಿಯ ಅನುವಾದ

೩) ನಮಸ್ಕಾರ—ಚಮತ್ಕಾರ
—ಎನ್ಕೆಯವರ ಹರಟೆಗಳು

೪) ಜೋಕಾಲಿ
—ಪಾ. ವೆಂಕಟರಮಣಾಚಾರ್ಯರ ಹರಟೆಗಳು

೫) ತೀರ್ಥ—ಪ್ರಸಾದ
—ದ. ಬಾ. ಕುಲಕರ್ಣಿಯವರ ಸಂಕಥನಗಳು

೬) ತೀರ್ಥರೂಪ ಕರ್ನಾಟಕ
—ಕನ್ನಡನಾಡಿನ ಪುಣ್ಯ ತೀರ್ಥಗಳ ಸಾಹಿತ್ಯದರ್ಶನ